ay.

**…ERTISERS PLEASE NOTE:**

- Advertisement Charges are payable in advance.
- Any change in the advertisement should be intimated a fortnight in advance.
- Blocks, if any will be returned at the cost of the advertiser.

The management reserves the right to reject advertisements, which may be deemed objectionable.

Advertisement Manager,
ANTARANGA, UDIPI.

…ngalore City.



ರೂಪಾಯಿ ೩೬ ಸಾವಿರ

# RS. 36000

ರೂಪಾಯಿ ೩೬ ಸಾವಿರ

## ಪೂರ್ಣ ಸರಿಯಾದ ೧೮ ಉತ್ತರಗಳಿಗೆ ಬಹುಮಾನವಾಗಿ ಹಂಚಲ್ಪಡುವುದು

ಮೊಹರು ಮಾಡಿಟ್ಟಿರುವ ನಮ್ಮ ಉತ್ತರದ ಯಾವುದಾದರೂ ಎರಡು ಸಾಲುಗಳಿಗೆ ಸರಿಹೋಗುವಂತಹ ಉತ್ತರಗಳಿಗೆ 100 ರೂ. ಗಳ ಎರಡು ಬಹುಮಾನಗಳು ಕೊಡಲ್ಪಡುವುವು.

ಮೊಹರು ಮಾಡಿಟ್ಟಿರುವ ಉತ್ತರದ ಎರಡು ಸಾಲುಗಳಿಗೆ ಎಲ್ಲ ದೃಷ್ಟಿಯಲ್ಲಿಯೂ ಸರಿಬೀಳುವಂತಹ ಪ್ರತಿಯೊಂದು ಉತ್ತರಕ್ಕೆ 30 ರೂಪಾಯಿಗಳ ಬಹುಮಾನಗಳನ್ನು ಕೊಡಲಾಗುವುದು. ಪ್ರಥಮ ಅಡ್ಡಸಾಲಿನ ಪ್ರಾರಂಭದ ಎರಡು ಸಂಖ್ಯೆಗಳು ನಮ್ಮ ಉತ್ತರದ ಅದೇ ಸಂಖ್ಯೆಗೆ ಸರಿಹೋಗುವುದಿದ್ದರೆ ಅಂತಹ ಉತ್ತರಗಳಿಗೆ 5 ರೂಪಾಯಿಯ ವಿಶೇಷ ಬಹುಮಾನಗಳು.

| | | | |
|---|---|---|---|
| | | | |
| | | | |
| | | | |
| | | | |

ಈ ಚಚ್ಚೌಕದಲ್ಲಿ ಪ್ರತಿಯೊಂದು ಸಂಖ್ಯೆಯನ್ನು ಒಂದು ಬಾರಿಗೆ ಮಿಕ್ಕದಂತೆ 3ರಿಂದ 18ರ ವರೆಗಿನ ಸಂಖ್ಯೆಯನ್ನು ಪ್ರತಿಯೊಂದು ಕಲಮಿನ ಸಾಲಿನ ಸಂಖ್ಯೆಯನ್ನು ಕೂಡಿಸಿದರೆ 42ಕ್ಕೆ ಮೀರದಂತೆ ಉಪಯೋಗಿಸಿರಿ. ಉತ್ತರಗಳನ್ನು ಕಳುಹಿಸಲು ಜೂಲೈ 17-1940 ಕೊನೆಯ ದಿನವಾಗಿರುತ್ತದೆ. ಫಲಿತಾಂಶ ಪ್ರಕಟನೆ ಜೂಲೈ 27, 1940.

ಒಂದು ಉತ್ತರಕ್ಕೆ ಪ್ರವೇಶಧನ ರೂಪಾಯಿ ... ಮೂರು ಉತ್ತರಗಳಿಗೆ ರೂ. ಎರಡು. ಎಂಟು ಉತ್ತರಗಳಿಗೆ ರೂ. ಐದು.

ನಿಯಮಗಳು:— ಮೇಲೆ ಸೂಚಿಸಿದ ನಿಯಮಗಳಿಗನುಸಾರವಾಗಿ, ಖಾಲಿ ಕಾಗದದಲ್ಲಿ ಬರೆದ, ಅವಶ್ಯವಿರುವ ಫೀಸನ್ನು ... ಉತ್ತರಗಳನ್ನು ಸ್ವೀಕರಿಸಲಾಗುವುದು. ಫೀಸನ್ನು ಮನಿಆರ್ಡರ್ ಅಥವಾ ಇಂಡಿಯನ್ ಪೋಸ್ಟಲ್ ಆರ್ಡರ್ ...ವಾದ ಹಣದ ಮೇರೆಗೆ ಬಹುಮಾನದಲ್ಲಿ ಬದಲಾವಣೆಗಳಾಗುವವು. ಆದರೆ ಸರಿಯಾದ ಪ್ರತಿ ...ಳ ಬಹುಮಾನವು ನಿಶ್ಚಯವಾಗಿ ಕೊಡಲಾಗುವುದು. ಸರಿಯಾದ ಉತ್ತ... ...ಡಲಾಗಿದೆ. ಎಲ್ಲ ಉತ್ತರಗಳು ಜೂಲೈ 22, 1940ರ ಒಳಗೆ ನಮ್ಮ ಕೈ... ...ಸುವುದಿಲ್ಲ. ನಿಮ್ಮ ಹೆಸರು ವಿಳಾಸಗಳನ್ನೂ ಉತ್ತರಗಳ ಸಂಖ್ಯೆ... ...ಮವನ್ನು ತಿಳಿಯಬೇಕಾಗಿದ್ದರೆ ಉತ್ತರಗಳೊಂದಿಗೆ ನಿಮ್ಮ ವಿಳಾಸ... ...ಮ್ಯಾನೇಜರರ ನಿಷ್ಕರ್ಷೆಯೇ ಕೊನೆಯದಾಗಿರುವುದಲ್ಲದೆ ಕಾಯಿದೆಯ ದೃಷ್ಟಿ... ...ಮ ಉತ್ತರವನ್ನೂ ಕಳುಹಿಸುವಾಗ ಒಪ್ಪಿಕೊಳ್ಳಬೇಕಾದ ಶರ...ವಾಗಿದೆ.

...ತ್ತರದ

ನಿಮ್ಮ ಉತ್ತರಗಳನ್ನು ಪ್ರವೇಶಧನದೊಂದಿಗೆ ಈ ವಿಳಾಸಕ್ಕೆ ಕಳುಹಿಸಿರಿ.

| | |
|---|---|
| | 12 |
| | 16 |
| | 19 |
| 6 | 7 |

The Manager,

**The National Distributing Co.**

"DAVAR HOUSE".

**199, Hornby Road, FORT BOMBAY.**

# ಅಂತರಂಗ

ಸಚಿತ್ರ ಕನ್ನಡ
ವಾರ ಪತ್ರಿಕೆ
ಉಡುಪಿ, ದ. ಭಾ.

ಚಲಚ್ಚಿತ್ರಾಂಕ

ಜುಲೈ ೭, ೧೯೪೦

ಸಂಪುಟ ೫ ಸಂಚಿಕೆ ೧೦೩



ಪ್ರಧಾನ ಸಂಪಾದಕ: **ಎಸ್. ಯು. ಪಣಿಯಾಡಿ.**

ಸಂಪಾದಕ: **ಕೆ. ಹೈದರ್.**

**ಸಹ-ಸಂಪಾದಕರು:**

**ಪಿ. ಎಲ್. ಅಡಿಗ, ಪಿ. ವಿ. ಆಚಾರ್ಯ.**





**PROPRIETORS:**
**GENERAL SUPPLIES LTD, UDIPI.**

**Our Advertising Agent & Representative at Bombay:**
**Sri. K. K. HEBBAR, 12, Wallace Street, Fort, Bombay.**

ಕನ್ನಡ ವಾರಪತ್ರಿಕೆ



# ಅಂತರಂಗ

ಜುಲೈ ೭, ೧೯೪೦



ಅಂತರ್ರಾಷ್ಟ್ರೀಯ ಪರಿಸ್ಥಿತಿಯು ದಿನಹೋದಂತೆ ಭೀಕರ ರೂಪವನ್ನು ತಾಳುತ್ತಾ ಬರುತ್ತಿದೆ. ಕ್ರೂರ ಜಂತುಗಳ ಮಧ್ಯದಲ್ಲಿರುವ ಪಶುವಿನಂತೆ ಭಾರತವೀಗ ದಿಙ್ಮೂಢಾವಸ್ಥೆಯಲ್ಲಿದೆ. ಆಧುನಿಕ ಅಸ್ತ್ರಶಸ್ತ್ರಗಳಿಂದ ಸುಸಜ್ಜಿತವಾಗಿದ್ದ ದೊಡ್ಡ ದೊಡ್ಡ ರಾಷ್ಟ್ರಗಳು ನಾಝೀ ವನ್ಯ ಜಂತುವಿನ ದಂಷ್ಟ್ರಕ್ಕೆ ಸಿಲುಕಿ ನುಚ್ಚುನೂರಾಗಿವೆ. ಭಾರತದ ಗತಿಯೇನು?

ಬ್ರಿಟಿಷ್ ಸರಕಾರವು ಇನ್ನೂ ಮಾತುಕತೆಯ ಗೊಂದಲದಲ್ಲೇ ನಿರತವಾಗಿದೆ. ಪಕ್ಷಗಳು ತಮ್ಮ ಹುಚ್ಚಾಟವನ್ನಿನ್ನೂ ನಿಲ್ಲಿಸಲಿಲ್ಲ. ಈ ಅವ್ಯವಸ್ಥೆಯ ಮಧ್ಯದಲ್ಲಿ ಮದ್ರಾಸಿನಿಂದ ಒಂದು ಕೂಗು ಕೇಳಲಾರಂಭಿಸಿದೆ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಪ್ರಜಾಪ್ರತಿನಿಧಿಗಳನ್ನೊಳಗೊಂಡ ವರಿಷ್ಠ ಸರಕಾರದ ರಚನೆಯಾಗಲೆಂದೇ ಆ ಕೂಗಿನ ಸಾರ.

**ಶ್ರೀ. ರಾಜಾಜಿಯವರ ಈ ಕೂಗಿನೊಂದಿಗೆ ದಕ್ಷಿಣ ಭಾರತೀಯರೆಲ್ಲರೂ ಸಹಕರಿಸುವರೆಂದೇ ನಮ್ಮ ಅಭಿಮತ. ಬ್ರಿಟಿಷ್ ಸರಕಾರಕ್ಕೆ ಭಾರತವಿಂದು ಬೆಂಬಲವನ್ನು ಕೊಡಬೇಕೆಂಬುದರಲ್ಲಿ ಎರಡಭಿಪ್ರಾಯವಿಲ್ಲ. ಆದರೆ ಆ ಬೆಂಬಲವು ಭಾರತೀಯರ ಹಾರ್ದಿಕ ಬೆಂಬಲವಾಗಿರಬೇಕು.** ಎಮರ್ಜೆನ್ಸಿ ಕಾಯಿದೆಯಂಥವುಗಳನ್ನು ಭಾರತೀಯರ ಮೇಲೆ ಹೇರುವುದಕ್ಕಿಂತ ಭಾರತೀಯರ ಪ್ರತಿನಿಧಿಗಳ ಮೂಲಕ ಆ ಬೆಂಬಲವನ್ನು ಪಡೆಯಬಾರದೇಕೆ? ರಾಷ್ಟ್ರೀಯ ಧುರೀಣರ ಮಾತಿಗೆ ಸಿಗುವಷ್ಟು ಮಾನ್ಯತೆಯು ಇತರರ ಬಿನ್ನಹಗಳಿಗೆ ದೊರಕಬಹುದೆ? ಈ ದೃಷ್ಟಿಯಿಂದ ಹಾಗು ಭಾರತದ ಸಂರಕ್ಷಣೆಯ ದೃಷ್ಟಿಯಿಂದ ನೋಡಿದರೆ ರಾಜಾಜಿಯವರು ಸಮರ್ಥಿಸಿರುವ ರಾಷ್ಟ್ರೀಯ ಸರಕಾರದ ಯೋಜನೆಗೆ ಸರ್ವರ ಬೆಂಬಲವೂ ಅತ್ಯವಶ್ಯ ದೊರಕಬೇಕಾಗಿದೆ.

ರಾಷ್ಟ್ರೀಯ ಸರಕಾರದ ರಚನೆಯಿಂದ ಮುಸ್ಲಿಂ ಲೀಗ್ ಮೊದಲಾದ ಪಕ್ಷಗಳ ಗೊಂದಲವು ಕನಿಷ್ಠಕ್ಕೆ ಇಳಿದು ಹೋಗುವುದರಲ್ಲಿ ಎರಡಭಿಪ್ರಾಯವಿಲ್ಲ. ಕಾಂಗ್ರೆಸು ತನ್ನ ಪ್ರತಿನಿಧಿಗಳಿಗೆ ಎಡೆಗೊಡದ ಮಂತ್ರಿಮಂಡಲಗಳನ್ನು ರಚಿಸಬಾರದೆಂದೇ ಲೀಗಿನ ಅಭಿಲಾಷೆ. ಆದರೆ ರಾಷ್ಟ್ರೀಯ ಸರಕಾರದ ರಚನೆಯಿಂದ ಪಕ್ಷಗಳ ವಿಷಯವೇ ತಲೆದೋರುವುದಿಲ್ಲ. ಇದರಿಂದ ಕಾಂಗ್ರೆಸಿಗೂ ನಷ್ಟವಿಲ್ಲ ಲೀಗಿಗೂ ಕುಂದಿಲ್ಲ.

ಪುನಃ ಅಧಿಕಾರಸ್ಥಾನವನ್ನೇರುವ ವಿಷಯದಲ್ಲಿ ಕೆಲವು ಕಾಂಗ್ರೆಸ್ ಧುರೀಣರಿಗೆ ಅನ್ಯಥಾ ಅಭಿಪ್ರಾಯವಿರುವುದಿದ್ದರೂ ಇಂದಿನ ಪರಿಸ್ಥಿತಿಯಲ್ಲಿ ಕಾಂಗ್ರೆಸು ಅಧಿಕಾರದಲ್ಲಿರುವುದು ಅತ್ಯವಶ್ಯವಾಗಿದೆ. ಕೇಂದ್ರದಲ್ಲಿ ರಾಷ್ಟ್ರೀಯ ಸರಕಾರವು ಅಧಿಕಾರ ನಡೆಸಿಕೊಂಡಿದ್ದರೆ ಜಯಪ್ರಕಾಶ ನಾರಾಯಣ ಮತ್ತು ಸುಭಾಷ ಬೋಸರಂತಹ ಧುರೀಣರು ಸೆರೆಮನೆಯೊಳಗಿರಬೇಕಾಗುತ್ತಿದ್ದಿಲ್ಲ. ಎಲ್ಲರೂ ಒಮ್ಮನಸ್ಸಿನಿಂದ ಬ್ರಿಟನಿಗೆ ಬೆಂಬಲವನ್ನು ಕೊಡಬೇಕಾದ ಈ ಕಾಲದಲ್ಲಿ ಸರಕಾರವು ದೇಶಕ್ಕಾಗಿ ದುಡಿಯುತ್ತಿರುವ ಜನರನ್ನು ಸೆರೆಹಿಡಿಯುವುದರಿಂದ ಮಹತ್ವದ ಹಾನಿಯಾಗುತ್ತಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಇಂಡಿಯಾ ಸರಕಾರವು ಈ ವಿಷಯಕ್ಕೆ ಸಾಕಷ್ಟು ಪ್ರಾಮುಖ್ಯತೆಯನ್ನು ಕೊಡುತ್ತಿಲ್ಲ. ವಿಚಾರಣೆಯಿಲ್ಲದೆ ರಾಜಕೀಯ ಧುರೀಣರನ್ನು ಸೆರೆ ಹಿಡಿದು ಶಿಕ್ಷಿಸುವಂತಹ ಭಯಂಕರ ಪರಿಸ್ಥಿತಿಯು ಪ್ರಕೃತ ಭಾರತದಲ್ಲಿಲ್ಲ. ಆದರೂ ನೂರಾರು ಮಂದಿ ಈ ವಿಧದ ಶಿಕ್ಷೆಗೊಳಗಾಗುತ್ತಿರುವುದೂ ಅದರಿಂದಾಗಿ ಜನರಲ್ಲಿ ಸರಕಾರದ ಯಥಾರ್ಥತೆಯ ಕುರಿತು ಅನ್ಯಥಾ ಭಾವನೆಯುಂಟಾಗುವುದೂ ಶೋಚನೀಯವಾಗಿದೆ.

ಜಾತೀಯ ಗೊಂದಲ, ರಾಜಕೀಯ ಅವ್ಯವಸ್ಥೆ ಮೊದಲಾದುವುಗಳನ್ನು ಹೋಗಲಾಡಿಸಿ ಪ್ರತ್ಯಕ್ಷವಾದ ಪರಿಣಾಮಕಾರಿಯಾದ ಬೆಂಬಲವನ್ನು ಪಡೆಯಲು ಬ್ರಿಟನಿಗೆ ನಿಜವಾಗಿಯೂ ಮನಸ್ಸಿದ್ದರೆ ಭಾರತದಲ್ಲಿ ಸರ್ವಾಧಿಕಾರ ಹೊಂದಿದ 'ಮರಿ ಹಿಟ್ಲರ'ರ ಸಂಖ್ಯೆಯನ್ನು ಹೆಚ್ಚಿಸುವುದಕ್ಕಿಂತ ಕಾಂಗ್ರೆಸ್ ಹಾಗೂ ಇತರ ಪಕ್ಷಗಳ ಧುರೀಣರಾಶಿಸಿರುವಂತೆ ರಾಷ್ಟ್ರೀಯ ಸರಕಾರದ ರಚನೆಗೆ ಅನುಕೂಲವಾದ ವಾತಾವರಣವನ್ನುಂಟುಮಾಡಬೇಕು. ಹೀಗೆ ಮಾಡದೆ ಇಂಡಿಯಾ ಸರಕಾರದವರು ಎಂದಿನಂತೆ ಅಲಕ್ಷ್ಯಭಾವದಿಂದಿದ್ದು ತಮ್ಮ ಕೈಗೂಸುಗಳಿಂದಲೇ ಕಾರ್ಯ ಸಾಧಿಸುವೆವೆಂಬ ಭರವಸೆಯಿಂದಿದ್ದರೆ ಈ ಕಠಿನ ಕಾಲದಲ್ಲಿ ಬ್ರಿಟನಿಗೆ ಸಿಗಬೇಕಾದಷ್ಟು ಬೆಂಬಲವು ಸಿಕ್ಕಬಹುದೋ ಎಂಬ ಸಂಶಯಕ್ಕೆ ಎಡೆದೊರಕುತ್ತದೆ. ಭಾರತದಲ್ಲಿರುವ ಬ್ರಿಟಿಷ್ ಪ್ರತಿನಿಧಿಗಳು ತಮಗೆನೇ ಹಾನಿಕಾರಕವಾದ ಮಹಾಪರಾಧವನ್ನು ಮಾಡಲಾರರೆಂದು ನಿರೀಕ್ಷಿಸಬಹುದೆ? ನಿಮಿಷ ನಿಮಿಷವೂ ಬದಲಾಗುತ್ತಿರುವ ಜಗತ್ತಿನ ಘಟನೆಗಳೊಂದಿಗೆ ಭಾರತೀಯ ವಾತಾವರಣವೂ ವ್ಯತ್ಯಾಸವಾಗಲೇ ಬೇಕು. ಭಾರತದ ಭವಿಷ್ಯವು ಮುಂದಿನ ಕೆಲವು ವಾರಗಳ ಘಟನೆಗಳ ಮೇಲೆ ಹೊಂದಿಕೊಂಡಿದೆ.

# ಅಂತರಂಗೀಯ



ಅಫಗಾನಿಸ್ತಾನದ ತರುಣ ರಾಜರು ಭಾರತದ ಪ್ರಮುಖ್ಯ ಗಡಿನಾಡನ್ನು ರಕ್ಷಿಸುವ ಹೊಣೆಯನ್ನು ಹೊತ್ತಿದ್ದಾರೆ.

## ಹೊಸಗನ್ನಡ ನಿಘಂಟು

೧೯೦೩ರಲ್ಲಾದ ತೆಲುಗು ನಿಘಂಟಿನಲ್ಲಿ ೩೩,೦೦೦ ಶಬ್ದಗಳಿರುವಾಗ ೧೮೯೪ರಲ್ಲಾದ ಕಿಟ್ಟೆಲ್‌ರವರ ಕನ್ನಡ ನಿಘಂಟಲ್ಲಿ ೬೫,೦೦೦ ಶಬ್ದಗಳಿವೆ. ಆದರೆ ಕನ್ನಡ ಭಾಷೆಯ ಹೆಚ್ಚಿನ ಶಬ್ದಗಳು ಕರ್ನಾಟಕವು ಕಾವೇರಿಯಿಂದ ಗೋದಾವರಿ ವರೆಗೆ ಹಬ್ಬಿರುವ ಕಾಲಕ್ಕೆ ಸಂಬಂಧಿಸಿದವುಗಳಾದುದರಿಂದ ಈಗಿನವರು ಕನ್ನಡವನ್ನು ಆಧುನಿಕ ಭಾಷೆಯನ್ನಾಗಿ ಮಾರ್ಪಡಿಸಬೇಕು. ಆದರೆ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸಮಿತಿಯವರಿಗೆ ಎಲ್ಲ ಪಂಗಡದವರ ಅಭಿಪ್ರಾಯಗಳಿಗನುಕೂಲವಾಗಿ ನಡೆಯುವುದು ದುಸ್ತರವಾಗಿ ಪರಿಣಮಿಸಿದೆಯೆಂದು ಮೈಸೂರಿನ ಶ್ರೀಮನ್ಮಹಾರಾಜರು ಕನ್ನಡಸಾಹಿತ್ಯಪರಿಷತ್ತಿನ ಬೆಳ್ಳಿಯ ಹಬ್ಬದ ಉದ್ಘಾಟನಾ ಮಾಡುತ್ತಾ ಹೇಳಿದರು.

ಕಟ್ಟಕಡೆಗೆ ಪರಿಷತ್ತಿನ ನಿಘಂಟನ್ನು ತಯಾರಿಸುವವರ ಪಾಲಿನ ಕಷ್ಟವಾವುದೆಂಬುದರ ರಹಸ್ಯವು ಈಗ ಬಯಲಾಯಿತು ನಿಘಂಟನ್ನು ತಯಾರಿಸುವವರು ಈಗಿನ ಕಾಲಕ್ಕೆ ಪ್ರಯೋಜನವೆಲ್ಲದ ಹಳೆಶಬ್ದಗಳನ್ನು ಬಿಟ್ಟು ಕೇವಲ ಹೊಸ ಕಾಲಕ್ಕೆ ಬೇಕಾದ ಹೊಸಗನ್ನಡ ನಿಘಂಟನ್ನು ತಯಾರಿಸ ಬಾರದೇಕೆ? ಹಾಗೆ ಮಾಡಿದರೆ ಪ್ರಾಯಶಃ ಹೊಸಗನ್ನಡಕ್ಕೆ ಬೇಕಾಗುವ ೨೦ ಸಾವಿರ ಶಬ್ದಗಳು ದೊರಕುವುದೂ ಕಷ್ಟವಾಗಬಹುದು!

೦ ೦ ೦

## ನೂತನಾರ್ಥ

"ನಮ್ಮ ಗೌರವವುಳಿಯಿತು, ಅದಕ್ಕಾಗಿ ಹೆಮ್ಮೆ ಪಡಿರಿ" ಎಂದು ಜನರಲ್ ವೇಗಾಂಡ್‌ರವರು ಫ್ರಾನ್ಸಿನ ಪತನವಾದ ಬಳಿಕವೂ ಹೇಳುತ್ತಿದ್ದಾರೆ.

ಪ್ರಾಯಶಃ "ಗೌರವ" ಮತ್ತು "ಹೆಮ್ಮೆ" ಎಂಬೀ ಶಬ್ದಗಳಿಗೆ ೧೯೪೦ರಲ್ಲಿ ನೂತನಾರ್ಥವನ್ನು ಅವರು ಕಲ್ಪಿಸಿಕೊಂಡಿರಬೇಕು!

೦ ೦ ೦

## ಪುನರುತ್ಥಾನ!

ಯುದ್ಧ ಪ್ರಾರಂಭಿಸುವ ಮೊದಲು "ಕೊಲ್ಲಲ್ಪಟ್ಟಿದ್ದ" ಡಾ| ಶೂಸ್ನಿಗ್‌ರವರು ತಮ್ಮ ಮಡದಿ ಮಕ್ಕಳೊಂದಿಗೆ ಮ್ಯೂನಿಕ್ ನಗರದಲ್ಲಿರುವರೆಂದು ವಾರ್ತೆ ಬಂದಿದೆ.

ಈ 'ಸತ್ಯಯುಗ'ದಲ್ಲಿ ಯೇಸುಕ್ರಿಸ್ತನಂತೆ ಎಷ್ಟು ಮಂದಿಯ "ಪುನರುತ್ಥಾನವಾಗುವುದಿಲ್ಲ!

೦ ೦ ೦

## ರಾಷ್ಟ್ರೀಯ ಸರಕಾರ

ನಮಗೆ ಮಿಶ್ರಮಂತ್ರಿಮಂಡಲ ಬೇಡ. ಈ ಸಂಧಿಗ್ಧ ಪರಿಸ್ಥಿತಿಯಲ್ಲಿ ರಾಷ್ಟ್ರೀಯ ಮಂತ್ರಿಮಂಡಲದ ರಚನೆಗೆ ಬ್ರಿಟಿಷ್ ಸರಕಾರವು ಎಡೆಕೊಡಬೇಕೆಂದು ರಾಜಾಜಿಯವರು ಮದ್ರಾಸಿನಲ್ಲಿ ಹೇಳಿದರು.

ಈ ಸೂಚನೆಯಿಂದ ಮಿ| ಜಿನ್ನರ ವಾದಕ್ಕೆ ಯೋಗ್ಯ ಉಪಾಯವನ್ನು ಕಂಡುಹಿಡಿದಂತಾಯಿತು. ಮುಸ್ಲಿಮ್ ಲೀಗಿನ ಪ್ರತಿನಿಧಿಗಳಿಲ್ಲದೆ ಕಾಂಗ್ರೆಸ್ ಮಂತ್ರಿಮಂಡಲವಾಗಲು ನಾವು ಬಿಡಲಿಕ್ಕೆಲ್ಲವೆಂಬುದೇ ಜಿನ್ನರ ವಾದ. ರಾಷ್ಟ್ರೀಯ ಸರಕಾರದಲ್ಲಿ ಪಕ್ಷಗಳ ಪಂಚಾತಿಕೆಯೇ ಇಲ್ಲ. ಅಂತೂ ಇತ್ತಂಡದವರ 'ಮಂಗ ಮುಷ್ಟಿತನ' ಸಡಿಲಾಗುವಂತಾಯಿತು. ಆದರೆ ರಾಷ್ಟ್ರೀಯ ಸರಕಾರದ ರಚನೆಯಾದರೂ ಎಂದು?

೦ ೦ ೦

## ಸತೀತ್ವದಲ್ಲಿ ಶಿಕ್ಷಣ

ಹುಡುಗಿಯರಿಗೆ ಸತೀತ್ವದಲ್ಲಿ ಶಿಕ್ಷಣ ದೊರಕಬೇಕೆಂದು ಸರ್. ಯಂ. ವಿಶ್ವೇಶ್ವರಯ್ಯನವರು ಮುಂಬಯಿ ಸ್ತ್ರೀ ವಿದ್ಯಾಲಯದ ಘಟಿಕೋತ್ಸವ ಭಾಷಣದಲ್ಲಿ ಹೇಳಿದರು.

ಆದರೆ ಸತೀತ್ವದಲ್ಲಿ ಭಾವನಾತ್ಮಕ ತರಬೇತಿಯನ್ನೀಯಲು ಸಾಧ್ಯವಲ್ಲದೆ ನೈಜ ಶಿಕ್ಷಣವನ್ನೀಯುವುದು ಕಷ್ಟವಲ್ಲವೆ?




## ದ್ರಾವಿಡರ ಯುದ್ಧ!

"ಹೆರ್ ಹಿಟ್ಲರನು ಜರ್ಮನರನ್ನು ಬಹುಕಾಲದಿಂದ 'ಆರ್ಯ'ರೆಂದು ಕರೆಯುತ್ತಾ ಬಂದಿದ್ದಾನೆ. ಆರ್ಯರನ್ನು ಸಮರ್ಥವಾಗಿ ವಿರೋಧಿಸಬೇಕಾದರೆ ದಕ್ಷಿಣ ಭಾರತೀಯರಾದ ನಾವೇ ಆಗಬೇಕು. ಆದುದರಿಂದ ಬ್ರಿಟಿಷ್ ಸರಕಾರದವರು ಕೂಡಲೆ ದಕ್ಷಿಣ ಭಾರತದಲ್ಲಿ ಜಸ್ಟಿಸ್ ಪಕ್ಷದ ಅರ್ಥಾತ್ ದ್ರಾವಿಡ ಧುರೀಣ ರಾಮಸ್ವಾಮಿ ನಾಯಕ್‌ರವರ ಧುರೀಣತ್ವದಲ್ಲಿ ದ್ರಾವಿಡ ಸೇನೆಯೆಂಬುವನ್ನು ನಿರ್ಮಿಸಬಾರದೇಕೆ?" ಕೇಳುತ್ತಾರೆ ಶ್ರೀ. ಕೆ. ಯಸ್. ಬಿ. (ಮಂಗಳೂರು).

ಚಲೋ ಸೂಚನೆಯಿದು. ಈ ಸೂಚನೆಯನ್ನು ಮುಂತಂದಿರುವ ತಮ್ಮ ಮೆದುಳಿನ ಶಕ್ತಿಯೆಷ್ಟಿದೆಯೆಂಬುದನ್ನು ತಿಳಿಯುವುದಕ್ಕಾಗಿ ತಮ್ಮನ್ನು ಕೂನೂರಿಗೆ ಕಳುಹಿಸಿದರಾಗಬಹುದು!

ooo

## ಭವಿಷ್ಯವಾಣಿ

"ಹಿಂದುಸ್ತಾನದಲ್ಲಿ ರಾಷ್ಟ್ರೀಯ ಸರಕಾರವಾದರೆ ಯಾರು ಪ್ರಧಾನ ಮಂತ್ರಿಗಳಾಗಬಹುದೆಂದು ದಯವಿಟ್ಟು ತಿಳಿಸುವಿರಾ?" ಕೇಳುತ್ತಾರೆ ಶ್ರೀ. ಎಸ್. ಆರ್. ಆರ್. (ಹಾಸನ).

ಸರ್ ಸಿಕಂದರ ಹಯಾತ್ ಖಾನ್, ಸಿ. ರಾಜಗೋಪಾಲಾಚಾರ್ಯ, ಮತ್ತು ಗೋವಿಂದ ವಲ್ಲಭಪಂತ ಈ ಮೂವರಲ್ಲೊಬ್ಬರು.

ooo

## ಹಳೇ ಯುಗ

ಕಾಗದದ ಬೆಲೆ ಮತ್ತಷ್ಟು ಹೆಚ್ಚಿರುವುದೆಂದು ಪತ್ರಿಕೆಗಳಲ್ಲೋದಿದೆ. ಪೆಟ್ರೋಲಿನ ಕ್ರಯವೂ ಅಧಿಕವಾಗಿದೆಯೆಂದು ಸುದ್ದಿ ಕೇಳಿದೆ. ಪತ್ರಿಕೆಗಳ ಪುಟಗಳು ಕಡಿಮೆಯಾದರೆ ಸಂಚರಿಸುವ ಬಸ್ಸುಗಳ ಸಂಖ್ಯೆಯೂ ಕಡಿಮೆಯಾದರೆ ನಾವು ಅನಾನುಕೂಲತೆಯ ಹಿಂದಿನ ಯುಗಕ್ಕೇ ಹೋದಂತಾಗುವುದಿಲ್ಲವೆ?" ಬರೆಯುತ್ತಾರೆ ಶ್ರೀ. ಯನ್. ವಿ. ಕೆ. (ಮುಂಬಯಿ).

ಅದರಲ್ಲೇನಾಶ್ಚರ್ಯ? ಯುದ್ಧವೆಂದರೆ ಅನಾಗರಿಕತೆಯ ಒಂದು ಸಂಜ್ಞೆ. ಅಂತಹ ಯುದ್ಧವಾಗುತ್ತಿರುವ ಕಾಲದಲ್ಲಿ ನಾಗರಿಕರು ಅನಾಗರಿಕರಂತೆ ಸ್ವಲ್ಪ ಕಾಲದ ವರೆಗಾದರೂ ಜೀವಿಸಬೇಡವೆ?

ooo

## ನೂತನ ಭಾರತಕ್ಕಾಗಿ

ಯುದ್ಧದಿಂದಾಗಿ ಜಗತ್ತಿನ ಪರಿಸ್ಥಿತಿಯೇ ವ್ಯತ್ಯಾಸವಾಗುತ್ತಿದೆ. ಕ್ರಾಂತಿಕಾರೀ ಬದಲಾವಣೆಗಳು ಆಗುವ ಸಂಜ್ಞೆಗಳು ಕಾಣಿಸುತ್ತಿವೆ. ಈ ಕಾಲದಲ್ಲಿ ಸ್ವತಂತ್ರ ಭಾರತವನ್ನು ಹೊಸದಾಗಿ ರಚಿಸುವ ಯತ್ನಗಳಾಗಬೇಡವೆ? ಭಾರತದ ರೂಪ ಬದಲಾವಣೆಯಾಗುವ ಕಾಲವು ಸನ್ನಿಹಿತವಾಗಿಲ್ಲವೆ? ಆ ಕೆಲಸವನ್ನು ಪ್ರಸ್ತುತ ಭಾರತದಲ್ಲಿ ಯಾರಾದರೂ ಮಾಡುತ್ತಿದ್ದಾರೆಯೆ?" ಕೇಳುತ್ತಾರೆ ಶ್ರೀ. ಎಸ್. ಆರ್. ಡಿ (ಹಾವೇರಿ)

ಪಂಡಿತ ನೆಹರೂರವರ 'ನ್ಯಾಶನಲ್ ಪ್ಲಾನಿಂಗ್ ಸಮಿತಿ'ಯವರು ಅದೇ ಕೆಲಸವನ್ನು ಮಾಡುತ್ತಿದ್ದಾರೆ. ರಾಷ್ಟ್ರೀಯ ಸಂಯೋಜನಾ ಸಮಿತಿಯು ಭಾವೀ ಸ್ವತಂತ್ರ ಭಾರತದ ತಳಹದಿಯನ್ನು ಕಟ್ಟುತ್ತಿದೆ. ನಿರಾಶರಾಗಬೇಡಿ. ooo

## ಊಹೆ!

ಹಿಟ್ಲರ್ ಮುಸ್ಸೋಲಿನಿಯವರು ಪೆಲೆಸ್ಟೈನಿನ ವಿಷಯದಲ್ಲಿ ಒಂದು ವಿಲಕ್ಷಣ ಧೋರಣೆಯನ್ನನುಸರಿಸಲಿದ್ದಾರಂತೆ. ಪೆಲೆಸ್ಟೈನು ಕ್ರಿಸ್ತ ಮತ್ತು ಮಹಮ್ಮದಿ ಪ್ರಪಂಚದ ಪವಿತ್ರ ಸ್ಥಳವಾದುದರಿಂದ ಇತ್ತಂಡದವರನ್ನು ಮೆಚ್ಚಿಸಲಿಕ್ಕಾಗಿ ಮುಸ್ಸೋಲಿನಿಯು ಕ್ರಿಶ್ಚಿಯನ್ ಪವಿತ್ರ ಸ್ಥಳಗಳನ್ನು ಪೋಪ್ ಸಾಹೇಬರಿಗೆ ಕೊಟ್ಟು ರೋಮನ್ ಕೆಥೋಲಿಕರ ಪ್ರಶಂಸೆಗೆ ಪಾತ್ರನಾಗುವನಂತೆ. ಮಿಕ್ಕುಳಿದ ಅಂಶವನ್ನು ಅರಬರಿಗೆ ಕೊಟ್ಟು ಮಹಮದೀಯರ್ಮ ಸಂತೋಷಕ್ಕೊಳಗಾಗುವನಂತೆ. ಅಲ್ಲಿರುವ ಯೆಹೂದಿಯರನ್ನು ಎಬಿಸೀನಿಯಕ್ಕೆ ಕಳುಹಿಸಲಾಗುವುದಂತೆ. ಇದು ನಿಜವೆ?" ಕೇಳುತ್ತಾರೆ ಶ್ರೀ. ಬಿ. ಆರ್. ಬಿ (ಬಂಟ್ವಾಳ)

ಹೌದು. ಇದು ನಿಜವಾದ ಊಹೆ!

(೧೭ನೇ ಪುಟ ನೋಡಿರಿ.)

# " ಮೋಹನನತ್ತಿಗೆ "

: ಕತೆಗಾರರು :

ಮಾಸ್ಟರ್ ಬಿ. ಯಸ್, ಯಂ. ಕುಮಾರ್.



ಕ್ರಿಸ್‌ಮಸ ರಜೆಯಲ್ಲಿ ಮೋಹನನು ಅತ್ತಿಗೆಯನ್ನು ಕಂಡಾಗ ಅವಳಲ್ಲೊಂದು ನವೀನತೆಯನ್ನು ಕಂಡನು. ಹಿಂದಿನ ರಜೆಯಲ್ಲಾದರೋ ಅವಳೋರ್ವ ಲಜ್ಜೆಯಿಂದ ತುಂಬಿದ್ದ ಮದುಮಗಳಾಗಿದ್ದಳು. ಆದರೆ ಈ ಸಾರಿ ಆಕೆ ನಿರ್ಲಜ್ಜಿತಳಾಗಿದ್ದಳು. ಮೊದಮೊದಲು ಮೋಹನನಿಗೀಯೋಚನೆಯಿದ್ದಿತು- ಎಲ್ಲಾದರೂ ಅವನಿಗೆ ಅತ್ತಿಗೆಯ ವಿಷಯದಲ್ಲಿ ಕೆಟ್ಟ ಭಾವನೆಗಳು ಬಂದಿಲ್ಲವಷ್ಟೆ? ಆದರೆ ಆಕೆಯ ತರತರದ ತಮಾಷೆ ಮತ್ತು ನಗು ಅವನಾಯೋಚನೆಯನ್ನು ದೂರೀಕರಿಸಿತು.

ಅತ್ತಿಗೆ ಅವನನ್ನು ಬಳಿಗೆ ಕರೆಯುತ್ತಿದ್ದಳು; ಕರೆದು ಅವನನ್ನು ತಮಾಷೆ ಮಾಡುವಳು; ಮಧುರವಾಗಿ ಮಾತನಾಡುವಳು. ಮೋಹನನು ಏನಾದರೂ ಹೇಳುವುದಿದ್ದರೆ ಅದನ್ನು ತಲೆತಗ್ಗಿಸಿ ಕೇಳುತ್ತಿದ್ದಳು.

ಒಂದು ದಿನ ಮೋಹನನು ಎಲ್ಲೋ ತನ್ನ ಮಿತ್ರರಲ್ಲಿ ಹೋಗಿದ್ದವನು ಅಂದು ಬರಲಾಗಲಿಲ್ಲ. ಬೆಳಿಗ್ಗೆ ಬರಲು ಅತ್ತಿಗೆಯು ಮಂದಹಾಸದಿಂದ ನುಡಿದಳು- 'ಬರೋಣಾಗಲಿ ಲಂಬೋದರರಾಯರೇ! ನಿನ್ನೆ ರಾತ್ರಿ ಎಲ್ಲಿದ್ದಿರಿ? ದಾರಿ ನೋಡಿ ನೋಡಿ ಕಣ್ಣುಗಳು ನೋವೆದ್ದುವು. ಕೊನೆಗೆ ನಿಮ್ಮಾ ಪ್ರೇಯಸಿಯು ಯಾರಿರಬಹುದೋ; ಬರಲು ಅಡ್ಡಕಡೆದವಳು?'

ಅಂದಿನಿಂದ ಅತ್ತಿಗೆಯು ಮೋಹನನ ಹೆಸರನ್ನೇ ಲಂಬೋದರನೆಂದಿಟ್ಟುಕೊಂಡಳು. ಅತ್ತಿಗೆಯಿಂದ ಮೋಹನನಿಗೀ ಹೆಸರು ಒಂದು ಪುರಸ್ಕಾರವಾಗಿ ದೊರೆತಿದ್ದಿತು. ಮೋಹನನಂದನು-'ಅತ್ತಿಗೆ! ನಾನು ನಿಮ್ಮ ಸಮೀಪ ಬರಲು ಬಹಳ ಬೆದರುತ್ತಿದ್ದೆ; ಕಾರಣ ನೀವೆಲ್ಲಾದರೂ ಕೋಪಿಸಿಕೊಳ್ಳುವಿರೋ ಎಂದು. ಆದರೆ ಈಗ ನೀವೆಂಥ ನಿಃಸ್ವಾರ್ಥ, ನಿರ್ಮಲ ಮನಸ್ಕ ಮತ್ತು ನಲ್ಮೆಯ ಮನದವರಾಗಿರುವಿರಿ!'

ಅದಾವ ಬಲೆಯಾಗಿದ್ದಿತೋ; ಅದರಲ್ಲಿ ಅತ್ತಿಗೆಯು ಮೋಹನನನ್ನು ಬಂಧಿಸಿಟ್ಟುಕೊಂಡಿದ್ದಳು. ಆಕೆ ಒಂದಲ್ಲೊಂದು ಕಾರಣದಿಂದ ಮೋಹನನನ್ನು ಸದಾ ತನ್ನ ಬಳಿಯಲ್ಲಿರುವಂತೆ ಮಾಡುತಿದ್ದಳು. ಮೋಹನನಿಗಾದರೋ ಆಕೆಯನ್ನು ಬಿಟ್ಟು ತೊಲಗಲು ಮನವೇ ಬರುತ್ತಿದ್ದಿಲ್ಲ.

ಅವನ ಹೃದಯವು ಹೊಸ ವಿಚಾರಗಳಿಗೆಡೆಕೊಟ್ಟಿತು. ಅವನಂದನು- 'ಅತ್ತಿಗೆ! ನಾನು ನಿಮ್ಮನ್ನು ಗುರುತಿಸುವಾಗ ಬಹಳ ದೇರಿಯಾಯಿತು. ಮೊದಲೇ ನಾನು ನಿಮ್ಮನ್ನು ಇಂದಿನಂತೆ ಗುರುತಿಸಿದ್ದಲ್ಲಿ, ನಾನು ಬಹಳ ಸಂತೋಷದಿಂದ ನನ್ನ ಹಿಂದಿನ ರಜೆಯನ್ನು ಕಳೆಯುತ್ತಿದ್ದೆ.'

ಅಂದಿನ ಎಲ್ಲಾ ಕಾರ್ಯಗಳು ಬಹಳ ಸಂತೋಷದಿಂದ ನಡೆದುವು. ಅವನಿಗೆ ಎಚ್ಚರದಲ್ಲಿ, ನಿದ್ದೆಯಲ್ಲಿ, ಆಲೋಚನೆಯಲ್ಲಿ, ಅಂತೂ ಪ್ರತಿಯೊಂದು ವಸ್ತುವಿನಲ್ಲಿ ಕೂಡಾ ಅತ್ತಿಗೆಯೇ ಗೋಚರಿಸುತ್ತಿದ್ದಳು.

ಮಾರನೆ ದಿನ ಮುಂಜಾನೆ ಏಳುತ್ತಲೇ ಅವನ ನಾಲಗೆಯಿಂದ ಹೊರಟಿತು- 'ಅತ್ತಿಗೆ!' ಒಡನೆ ಪ್ರತ್ಯುತ್ತರ ದೊರಕಿತು- 'ಅಪ್ಪಾ ಲಂಬೋದರ!' ಕಣ್ಣು ಬಿಟ್ಟು ನೋಡಲು ಅತ್ತಿಗೆ ಚಹಾದ ಲೋಟೆಯನ್ನು ಹಿಡಿದುಕೊಂಡು ನಗುತ್ತಾ ನಿಂತಿದ್ದಳು. ಪುನಃ ಅವನ ಬಾಯಿಯಿಂದ ಹೊರಟಿತು- 'ನನ್ನ ಅತ್ತಿಗೆ!' ಅತ್ತಿಗೆಯು ಬಹಳ ಪ್ರೀತಿ ಪೂರ್ವಕ ಸ್ವರದಿಂದ ಉತ್ತರಿಸಿದಳು- 'ನನ್ನ ಭಾವ!' ಮೋಹನನು ಚಾಲೋಟವನ್ನೆತ್ತಿಕೊಂಡು ಕುಡಿಯಲು ಉದ್ಯುಕ್ತನಾದನು. ಅಷ್ಟರಲ್ಲಿ ಏನೋ ನೆನಪಾಗಲು ಅವನಂದನು- 'ನೀವು ಚಾ ಕುಡಿದಿರೆ?' ಅತ್ತಿಗೆಯು ನಗುತ್ತಾ ತಲೆಯನ್ನಲ್ಲಾಡಿಸಿದಳು- 'ಊಂ ಹ್ಞೂಂ'.

'ಹಾಗಾದರೆ ತೆಗೆದುಕೊಳ್ಳಿ; ನೀವು ಪ್ರಥಮ ಕುಡಿಯಿರಿ.'

'ಥೂ! ಬಹಳ ಯೋಚನೆ ಅತ್ತಿಗೆದ್ದು. ಹಾಗಿರುತ್ತಿದ್ದರೇ ದಸರಾಕ್ಕೆ ಏನಾದರೂ ಉಡುಗೊರೆಯನ್ನು ತರುತ್ತಿದ್ದಿಲ್ಲವೇ?'

ಮೋಹನನಿಗೆ ಬಹಳ ನಾಚಿಕೆಯಾಯಿತು. ಪಾಪ! ಅವನಿಗೇನು ಗೊತ್ತು? ಅತ್ತಿಗೆಯು ತನ್ನನ್ನಿಷ್ಟು ಪ್ರೀತಿಸಬಹುದೆಂದು! ಅವನಂದನು- 'ಅತ್ತಿಗೆ! ಕ್ಷಮಿಸಿ; ನನ್ನಿಂದ ಮಹಾ ಅಪರಾಧವಾಯಿತು.' ಅವನು ಮನದಲ್ಲೇ ನಿಶ್ಚಯಿಸಿಕೊಂಡನು- ಈ ಬಾರಿಯ ವೇತನ ದೊರೆತೊಡನೆ ಅತ್ತಿಗೆ

ಗೋಸ್ಕರ ಏನಾದರೊಂದು ಉಡುಗೊರೆಯನ್ನು ತಂದೊಪ್ಪಿಸಲೇ ಬೇಕು.

ಅತ್ತಿಗೆಯಂದಳು- 'ಸರಿ; ಅತ್ತಿಗೆಯಾದರೂ ನೆಸಪಿಡುವ ಒಂದು ವಸ್ತುವೇ? ಒಂದು ವೇಳೆ ಮಡದಿಯಾಗುತ್ತಿದ್ದರೆ ಮರೆಯುತ್ತಿದ್ದಿಲ್ಲ.'

ಮೋಹನನಂದನು- 'ನೀವೇನು ಬೇಕಾದರೂ ಅಂದುಕೊಳ್ಳಿ ಅತ್ತಿಗೆ; ಆದರೂ ನಾನೀ ಕುರಿತು ಬೇಗನೆ ಆಲೋಚಿಸುವೆನು.'

ಅತ್ತಿಗೆಯು ಮೋಹನನು ವ್ಯಸನಾಕ್ರಾಂತನಾದುದನ್ನು ಕಂಡು ಪುನಃ ಪ್ರೀತಿಯ ಮಧುರ ನುಡಿಯಿಂದಂದಳು. 'ಹೋಗಲಿ; ಲಂಬೋದರರಾಯರೇ! ನಾನಿನ್ನೇನನ್ನೂ ಆಡುವುದಿಲ್ಲ. ನನ್ನ ಚಾ ಮಾತ್ರ ತಣ್ಣಗಾಗದಿದ್ದರೆ ಸಾಕು! ಅದನ್ನು ಕುಡಿಯೋಣಾಗಲಿ!'

'ಇಲ್ಲ; ಮೊದಲು ನೀವು ಕುಡಿಯಲೇ ಬೇಕು. ಹಾಗಾದರೆ ಮಾತ್ರ ನಾನು ಕುಡಿಯುವೆನು.'

'ನೀವೆಲ್ಲಾ ಕುಡಿಯುವುದಕ್ಕೆ ಮೊದಲಾಗಿ ನಾನು ಕುಡಿಯಬೇಕೇ?'

'ಅಲ್ಲ, ಅತ್ತಿಗೆ! ನನಗಾಗಿ ಕುಡಿಯಬೇಕು.' ಅನ್ನುತ್ತಾ ಅವನು ಚಹಾದ ಲೋಟಿಯನ್ನು ಆಕೆಯ ಬಾಯ ಹತ್ತಿರ ಕೊಂಡುಹೋದನು. ಅತ್ತಿಗೆಯು ಕರದಿಂದ ಅಡ್ಡಯಿಸಲು ಚಹಾವು ಚೆಲ್ಲಿಹೋಯಿತು.

'ನನ್ನ ಚಹಾವನ್ನೇಕೆ ಹಾಳು ಮಾಡುವಿರಿ. ಕುಡಿಯುವುದಿಲ್ಲವಾದರೆ ಸರಿಯಾಗಿ ಹೇಳಿ ಬಿಡಿ.'

'ಹ್ಞಾಂ! ನೀವು ಪ್ರಥಮ ಕುಡಿಯದಿದ್ದಲ್ಲಿ ನಾನೂ ಕುಡಿಯಲಾರೆ!' ಮೋಹನನಿಗೀ ಮಾತಿನಲ್ಲಿ ಸಂಪೂರ್ಣ ಭರವಸೆ ಇದ್ದಿತು. ಆದರೆ ಅತ್ತಿಗೆ ಇಳಿಮುಖಳಾಗಿ ತಲೆಯನ್ನಲ್ಲಾಡಿಸುತ್ತಾ ಅಂದಳು- 'ನಾನು ಹೇಗೆ ಕುಡಿಯಲಿ? ಇನ್ನೂ ನಿಮ್ಮಣ್ಣಯ್ಯನವರು ಕುಡಿದಿಲ್ಲ!'

ಈ ಸಂದರ್ಭದಲ್ಲಿ ಅಣ್ಣನ ಮಾತು ಬರಲು ಮೋಹನನಿಗೇನಾದರೂ ಹೊಳೆಯಿತೋ ಇಲ್ಲವೋ; ಆದರೆ ಅತ್ತಿಗೆಯಲ್ಲೊಂದು ಸ್ಫೂರ್ತಿಯು ಕಾಣುತ್ತಿದ್ದಿತು. ಅದರ ಯೋಚನೆಯೂ ಅವನಿಗಾಗಲಿಲ್ಲ. ಅವನಲ್ಲಿ ತರತರದ ಯೋಚನೆಗಳು ಮೂಡಿದುವು.

ಅಂದು ಭೋಜನದ ಸಮಯ ಮೋಹನನು ಅತ್ತಿಗೆಯನ್ನು ಸರಿಯಾಗಿ ನೋಡುತ್ತಿದ್ದಿಲ್ಲ. ಫಕ್ಕನೆ ನಾಲ್ಕು ದೃಷ್ಟಿಗಳು ಒಂದಾಗುತ್ತಿದ್ದರೆ ಅವನು ತಲೆ ತಗ್ಗಿಸಿಕೊಳ್ಳುತ್ತಿದ್ದನು. ಹಾಸ್ಟೆಲಿನಲ್ಲಿ ಏನೆಲ್ಲಾ ದೊರಕುತ್ತವೆಂಬ ಅಣ್ಣನ ಪ್ರಶ್ನೆಯಿಂದ ಮೋಹನನು ಎಚ್ಚೆತ್ತನು- 'ಎಲ್ಲವೂ!' ಎಂದುತ್ತರಿಸಲು ಅತ್ತಿಗೆಯಂದಳು-'ಅಲ್ಲಿಯ ಮೃಷ್ಟಾನ್ನ ಭೋಜನವನ್ನು ನೋಡಿ ಇಲ್ಲಿಯ ಆಹಾರವು ಹೇಗೆ ಒಪ್ಪಬೇಕೋ?

ಅಣ್ಣನಂದನು-'ನಮ್ಮ ಸಮಯದಲ್ಲಿ ಬಹಳ ನಿಕೃಷ್ಟವಾದ ಭೋಜನವು ದೊರಕುತ್ತಿದ್ದಿತು. ಒಳ್ಳೆಯದು; ಏನೆಲ್ಲ ತರಕಾರಿಗಳು ದೊರಕುತ್ತವೆ?'

'ಇವೇ ಎಲ್ಲಾ.'

'ಒಳ್ಳೆಯದು; ಇದು.......'

'ಹ್ಞಾಂ........'

'ಅರೆ! ಈ ತರಕಾರಿ ಅಲ್ಲಿ ದೊರಕುವುದು ಬಹಳ ಕಷ್ಟ!'

ಮೋಹನನಿಗೆ ತನ್ನ ತಪ್ಪಿನ ಅರಿವಾಯಿತು. ಅವನಿಂದು ಅತ್ತಿಗೆಯ ಎಲ್ಲಾ ವಿಷಯಗಳೂ ಒಂದು ಗೂಢದಂತೆ ಕಂಡು ಬರುತ್ತಿದ್ದುವು. ಅಣ್ಣ ಮತ್ತು ಅತ್ತಿಗೆ ಸಂಜ್ಞೆಯಿಂದ ಏನೇನೋ ಆಡಿಕೊಳ್ಳುತ್ತಿದ್ದರು. ಅಣ್ಣನ ಯಾವ ಮಾತಿನಿಂದ ಅತ್ತಿಗೆ ನಾಚುವಳು; ಯಾವ ಮಾತಿನಿಂದ ನಗುವಳು; ಎಂಬುದನ್ನು ಮನದಲ್ಲೇ ಆಲೋಚಿಸುತ್ತಿದ್ದನು.

ಮೋಹನನು ಒಮ್ಮೊಮ್ಮೆ ಯೋಚಿಸುತ್ತಿದ್ದನು-ಅಣ್ಣನು ಹೇಗಿರುವನು? ಅತ್ತಿಗೆ ಹೇಗಿರುವಳು? ಅವಳಿಗೆ ಅವ ಳಂಥವನೇ ಸಿಗಬೇಕಿತ್ತು. ಹೀಗೆಲ್ಲಾ ಯೋಚಿಸಿದ ನಂತರ ಅಂಥವನು ಯಾರು ಎಂಬ ಪ್ರಶ್ನೆಯು ಮಾಡಲು, ಅದಕ್ಕುತ್ತರವಾಗಿ ತಾನೇ ಕಂಡು ಬರುತ್ತಿದ್ದರೂ ಅದನ್ನು ಬರಬಿಡುತ್ತಿದ್ದಿಲ್ಲ.

ಅಣ್ಣನಿಂದ ಅತ್ತಿಗೆಯು ಮೋಹನನು ಚೆನ್ನಾಗಿ ಹಾಡಬಲ್ಲನೆಂಬುದನ್ನು ಕೇಳಿದ್ದಳು. ಅದಕ್ಕಾಗಿ ಅವಳೊಂದು ದಿನ ಅವನನ್ನು ಒತ್ತಾಯಿಸಿದಳು. ಆತನಿಗೂ ಮನಸ್ಸಿದ್ದಿತು. ಆದರೆ ಸಮಯ

ಸರಿಯಾಗಿ ದೊರಕುತಿದ್ದಿಲ್ಲ. ಕೊನೆಗೆ ಅಣ್ಣನು'ಇಂದು ರಾತ್ರಿ ನಾವು ಒಂದಾಗಿರುವೆವು; ಆಗ ಹಾಡಬೇಕು.' ಎಂಬ ತೀರ್ಪನ್ನಿತ್ತನು.

ಸಂಜೆಗೆ ಅಣ್ಣನು ಬಂದು ಅಂದನು- 'ನನಗೋರ್ವ ಮಿತ್ರರ ಆಹ್ವಾನಕ್ಕೆ, ಹೋಗಬೇಕಾಗಿದೆ. ಬರುವಾಗ ಬಹಳ ತಡವಾದೀತು.'

ಹಾಡಿನ ಪ್ರೊಗ್ರಾಮ್ ನಿಂತು ಹೋಯಿತೆಂದು ಮೋಹನನು ಬಹಳ ಉದಾಸೀನನಾದನು. ಆದರೆ ಅಣ್ಣನು ಹೋಗಲನುವಾದಾಗ ಅಂದನು- "ಮೋಹನ್! ನಾನು ಹೋಗುವೆನು. ನೀನು ನಿನ್ನತ್ತಿಗೆಗೆ ಹಾಡನ್ನು ಕೇಳಿಸಬೇಕು.' ಮೋಹನನ ಸಂತೋಷಕ್ಕೆ ಪಾರವೇ ಇದ್ದಿಲ್ಲ. ಅಣ್ಣನೆದುರಿಗೆ ಅತ್ತಿಗೆಗೆ ಹೇಗೆ ಹಾಡನ್ನು ಕೇಳಿಸುವುದೆಂಬ ಯೋಚನೆಯು ಅವನಲ್ಲಿದ್ದಿತು. ಅದೀಗ ಮಾಯವಾಯಿತು.

ರಾತ್ರಿ ಭೋಜನಾನಂತರ ಮೋಹನನು ಹಾಡತೊಡಗಿದನು. ಅವನ ಪ್ರತಿಯೊಂದು ಹಾಡೂ ಪ್ರೇಮಗೀತೆಯಾಗಿದ್ದಿತು; ಪ್ರೇಮರಸದಿಂದ ತುಂಬಿ ತುಳುಕುತ್ತಿದ್ದಿತು. ಆದರೆ ಅತ್ತಿಗೆಗಿದೇನೂ ಸರಿದೋರಲಿಲ್ಲ. ಅವಳಂದಳು- 'ಲಂಬೋದರರೇ! ಈ 'ಹಾಯ್ ಹಾಯ್' ಅಲ್ಲದೆ ನಿಮಗೆ ಬೇರೇನಾದರೂ ಬರುತ್ತದೋ ಇಲ್ಲವೋ?'

'ಈ ಹಾಡುಗಳು ನಿಮಗೊಪ್ಪುವುದಿಲ್ಲವೇ ಅತ್ತಿಗೆ?' ಮೋಹನನಂದನು.

'ಹಾಡುಗಳು ದುಃಖದಿಂದ ತುಂಬಿಕೊಂಡಿವೆ. ಕಡೆಗೆ ಯಾರಾ ಕಲ್ಲು ಹೃದಯದವಳು? ಅವಳಿಗಾಗಿ ಈ ಹಾಡಿನಿಂದ ಈ ರೀತಿ ಮರುಗುತ್ತಿರುವಿರಿ?'

ಮೋಹನನ್ನೇನನ್ನೂ ಆಡಲಿಲ್ಲ.... ಅತ್ತಿಗೆಯೇ ಪುನಃ ಪ್ರಶ್ನಿಸಿದಳು- 'ಹೇಳುವುದಿಲ್ಲವೇಕೆ? ನಾನು ನಿಮ್ಮ ಅಣ್ಣನೊಡನೆ ಹೇಳಿ ಆಕೆಯನ್ನು ಬೇಗನೆ ತರುವಂತೆ ಮಾಡುವೆನು.'

'ಏನು ಹೇಳುತ್ತಿರುವಿರಿ ಅತ್ತಿಗೆ?'

'ಹೇಳುವುದಲ್ಲ? ಕೇಳುತ್ತಿರುವೆನು! ಅವಳಾರೆಂದು?'

'ಆರೂ ಇಲ್ಲ.'

'ನೋಡಿ! ಯಾರನ್ನಾದರೂ ತರಲೇಬೇಕು. ಆದರೆ 'ಮಿಸ್' ಆಗಿರಬಾರದು; ಅವಳು ನನ್ನನ್ನು ಓಡಿಸಿ ಬಿಟ್ಟಾಳು.'

'ನಾನಾವಾಗ ಅಂದೆನತ್ತಿಗೆ! ನಾನು 'ಮಿಸ್'ಳನ್ನು ತರುವೆನೆಂದು.'

'ಹಾಗಾದರೆ ಆಕೆ ಯಾರು?'

'ಹೇಳಿದೆನಲ್ಲವೇ ಯಾರು ಇಲ್ಲವೆಂದು!'

'ಈಗ ತಾನೇ ಅಂದಿರಿ! ಮಿಸ್ ಅಲ್ಲವೆಂದು!! ಇದರಿಂದ ಖಂಡಿತವಾಗಿಯೂ ನೀವೋರ್ವಳ ಬಲೆಯಲ್ಲಿ ಸಿಲುಕಿರುವಿರೆಂಬುದು ವ್ಯಕ್ತವಾಗುತ್ತಿದೆ. ನಾನೇನು ಚಿಕ್ಕ ಬಾಲೆಯೇ?'



ಮೋಹನನು ಮನದಲ್ಲೇ ನೆನೆದನು. ಅತ್ತಿಗೆ ಕೇಳುತ್ತಿರುವಳು. ಹಾಗಾದರೆ ಅಂದು ಬಿಡಲೇ....'ನೀವು'....ಎಂದು. ಆದರೆ ಆಕೆಯ ಮೊಗವನ್ನು ನೋಡಿದೊಡನೆ ಹಾಗನ್ನಲು ಆತನಿಗೆ ನಾಲಗೆಯೇ ಬಾರದು. ಅವನು ಒಂದೇ ಸವನೆ ಅವಳ ಸೌಂದರ್ಯವನ್ನು ಮನದಣಿಯೆ ಹೀರಿದನು. ಕೊನೆಗೆ ಇನ್ನೊಂದು ಹಾಡನ್ನು ಹಾಡಲುಪಕ್ರಮಿಸಿದನು. ಅದರಲ್ಲಿ ಇನ್ನಷ್ಟು ಕಾತರತೆಯು ತುಂಬಿದ್ದಿತು. ಅತ್ತಿಗೆ ಎದ್ದು ಒಳ ನಡೆದುಬಿಟ್ಟಳು. ಅವನಿಗಿದರ ಅರಿವಿದ್ದಿಲ್ಲ. ಅವನು ನೋಡಲು ಅತ್ತಿಗೆಯು ಅಲ್ಲಿದ್ದಿಲ್ಲ. ಸುಮ್ಮನೆ ಕುಳಿತುಕೊಂಡನು. ಅತ್ತಿಗೆಯು ತಾಂಬೂಲವನ್ನು ಹಿಡಿದುಕೊಂಡು ಬಂದವಳೇ ಅಂದಳು- 'ಗಾಯನ ಮುಗಿಯಿತು. ತಗೊಳ್ಳಿ ತಾಂಬೂಲ.' ಪುನಃ ಅವಳು ನಗುತ್ತಾ ಅಂದಳು- 'ಕಣ್ಣೀರನ್ನೆಲ್ಲಾ ಒರೆಸಿಕೊಂಡಿರೇ ಲಂಬೋದರರಾಯರೇ?'

ಮೋಹನನು ಲಜ್ಜಾನ್ವಿತನಾಗಿ ತಲೆತಗ್ಗಿಸಿ ಅಂದನು-'ಎಂಥ ಕಣ್ಣೀರತ್ತಿಗೆ'? ತುಸುವೇಳೆ ಮೌನಳಾಗಿದ್ದು, ನಗುತ್ತಾ ಅತ್ತಿಗೆಯಂದಳು-'ತಾಂಬೂಲ ಹಾಕಿಕೊಳ್ಳಬಾರದೇ?'

ಮೋಹನನ ಹತ್ತಿರ ಹರಿವಾಣವಿದ್ದಿತು. ಅವನೊಂದು ಎಲೆಯನ್ನೆತ್ತಿ ತಿಂದನು, ತುಸು ಸಮಯ ಈರ್ವರೂ ಮೌನರಾಗಿದ್ದರು. ಅತ್ತಿಗೆಯು ಒಂದೇ ಸವನೆ ನಗಹತ್ತಿದಳು. ಮೋಹನನು ನಿದ್ದೆಯಿಂದೆಚ್ಚೆತ್ತವನಂತೆ ನೋಡತೊಡಗಿದನು.ಅತ್ತಿಗೆಯು ಇನ್ನೂ ನಗುತ್ತಿದ್ದಳು. ಅವನಿಗೆ ಬಗೆಹರಿಯಲಿಲ್ಲ. ಅತ್ತಿಗೆಯೆಂದಳು-'ನನ್ನ ಮಾತಿನಂತೆ ಎಲೆತಿಂದಿರಿ. ಆದರೆ ಅಡಿಕೆ ತಿನ್ನಲೇ ಇಲ್ಲವಲ್ಲಾ! ಕೊನೆಗಾದರೂ ಕಾರಣ

ವನ್ನು ಹೇಳಬಾರದೇ?' ಮೋಹನನು ನೋಡಲು ತನಗಾಗಿಟ್ಟಿದ್ದ ಅಡಿಕೆಯ ತುಂಡುಗಳು ಅಲ್ಲೇ ಇದ್ದುವು. ಅವನ್ನೆತ್ತಿ ಬಾಯೊಳಗೆ ಹಾಕಿಕೊಂಡನು. ಅತ್ತಿಗೆಯು ದಾಸಿಯು ಹೊರಡಲನುವಾಗಿರಬಹುದೆಂದೆನ್ನುತ್ತಾ ಒಳಕ್ಕೆ ಹೋದಳು. ಹಿಂತಿರುಗಿ ಬರುವಾಗ ಕ್ರೋಧಗೊಂಡವಳಾಗಿ ದಡಬಡಿಸುತ್ತಾ ಬಂದಳು. ಮೋಹನನು ಆಕೆಯಿಂದ ಕ್ಷಮೆಯನ್ನು ಯಾಚಿಸಲು ಆಲೋಚಿಸಿದ್ದನು. ಆದರೆ ಧೈರ್ಯ ಬರಲಿಲ್ಲ. ಅವನೆಂದೂ ಅವಳೀರೀತಿ ಕುಪಿತಳಾದುದನ್ನು ಕಂಡಿರಲಿಲ್ಲ.

ಅಷ್ಟರಲ್ಲಿ ಹೊರಗಿನಿಂದ ಅಣ್ಣನು ಕದತಟ್ಟಿದ ಶಬ್ದವಾಯಿತು. ಅವನ ಎಲ್ಲಾ ಆಶೆಗಳೂ ನಿರಾಶವಾದುವು.

ಅತ್ತಿಗೆ ಮೆಲ್ಲಮೆಲ್ಲನೆ ಕದ ತೆರೆಯಲು ಸಾಗುತ್ತಿದ್ದಂತೆ ಮೋಹನನ ಬಳಿ ತಡೆದು ಅಲ್ಲೇ ಇದ್ದ ಸಣ್ಣ ರೋಲಿನಿಂದ ಆತನ ಶಿರಕ್ಕೆ ಮೆಲ್ಲನೆ ತಟ್ಟಿದ್ದಳು; ಮುತ್ತು ತನ್ನ ಮುತ್ತಿನಂಥ ಹಲ್ಲುಗಳನ್ನು ತೋರ್ಪಡಿಸುತ್ತಾ ಅಂದಳು-'ಲಂಬೋದರ!'

ಆ ಸ್ವರದಲ್ಲಿ ಎಂಥ ಮಾಯಾಜಾಲವಿದ್ದಿತೋ ಬಲ್ಲವರಾರು? ಆದರೆ ಮೋಹನನು ಮಾತ್ರ ಪ್ರಜ್ಞಾಶೂನ್ಯನಾಗಿದ್ದನು.

ಮೋಹನನಿಗೆ ಎಚ್ಚರವಾದಾಗ ಅವನು ಹಾಸಿಗೆಯ ಮೇಲೆ ಮಲಗಿಸಲ್ಪಟ್ಟಿದ್ದನು......ತಾನು ಹೇಗೆ ಹಾಸಿಗೆಯನ್ನು ಸೇರಿದೆನು; ಅಣ್ಣನು ಏನು ಕೇಳಿದನು; ಅತ್ತಿಗೆ ಏನೆಂದು ಉತ್ತರಿಸಿದಳು......ಅವನಿಗೊಂದೂ ಗೊತ್ತಿದ್ದಿಲ್ಲ. ಅವನಿಗಿಷ್ಟೇ ಗೊತ್ತಿದ್ದಿತು ಅತ್ತಿಗೆ 'ಲಂಬೋದರ' ಅಂದಿದ್ದಳು.

ಅತ್ತಿಗೆಯನ್ನು ನೆನೆದು ಆತನು ಬಹಳ ಲಜ್ಜಿತನಾದನು. ಅವನು ಅತ್ತಿಗೆಯ ಸ್ವರೂಪವನ್ನು ಹೃದಯದಿಂದ ಅಳಿಸಲು ಪ್ರಯತ್ನಿಸಿದನು. ಆದರೆ ಮಾಯಾ ಕೃಷ್ಣನಂತೆ ಅವನಿಗೆ ಎಲ್ಲೆಲ್ಲೂ ಅತ್ತಿಗೆಯೇ ಗೋಚರಿಸುತ್ತಿದ್ದಳು ಬೆಳಿಗ್ಗೆ ಮುಖ ಹೇಗೆ ತೋರಿಸಲಿ ಎಂಬ ಯೋಚನೆಯಲ್ಲಿದ್ದ ಮೋಹನನಿಗೆ ಇರುಳು ಕಳೆದುದು ಗೊತ್ತೇ ಆಗಲಿಲ್ಲ. ಬೆಳಿಗ್ಗೆ ನೋಡಲು ಅಣ್ಣ ಅಥವಾ ಅತ್ತಿಗೆಯಲ್ಲಿ ಯಾವ ತರದ ಬದಲಾವಣೆಯೂ ಇದ್ದಿಲ್ಲ; ಅವನು ಬಹಳ ಅಚ್ಚರಿಗೊಂಡನು.

ಹೃದಯವು ಪದೇ ಪದೇ 'ಅತ್ತಿಗೆಯ ಕಾಲು ಹಿಡಿದು ಕ್ಷಮೆಯನ್ನು ಬೇಡು' ಅನ್ನುತ್ತಿದ್ದಿತು. ಆದರೆ ಧೈರ್ಯ ಬಾರದು. ಅಂತೇ ಕಾಲೇಜಿಗೆ ಮರಳುವ ದಿನವೂ ಬಂತು.

ಕಾಲೇಜಿಗೆ ತೆರಳುವ ಮುನ್ನ ಅತ್ತಿಗೆಯು ಮೋಹನನ ಹಣೆಗೆ ತಿಲಕವನ್ನಿಟ್ಟಳು. ಮೋಹನನು ಆಕೆಯ ಕಾಲಿಗೆರಗಲೋಸುಗ ಬಗ್ಗಲು ಫಕ್ಕನೆ ಆತನ ದೃಷ್ಟಿಯು ಆಕೆಯ ನೀರು ತುಂಬಿದ್ದ ನಯನಗಳ ಕಡೆಗೆ ಹೋದುವು. ಅದನ್ನು ಕಂಡು ಆತನ ಹೃದಯವು ತಳಮಳಿಸತೊಡಗಿತು. ಅವನು ತನ್ನ ಕಣ್ಣೀರಿನಿಂದ ಅತ್ತಿಗೆಯ ಕಾಲು ತೊಳೆಯುತ್ತಾ ಅಂದನು- 'ಅತ್ತಿಗೆ! ನನ್ನನ್ನು ಕ್ಷಮಿಸಿ.'

ಅತ್ತಿಗೆಯಂದಳು- 'ಕ್ಷಮೆಯನ್ನು ಯಾಚಿಸಲು ನೀವು ಮಾಡಿದ ತಪ್ಪಾದರಾವುದು?'

''ಅಲ್ಲ ಅತ್ತಿಗೆ! ನಾನು ಪಾಪಿಯಾಗಿರುವೆನು! ದ್ರೋಹಿಯಾಗಿರುವೆನು! ಎಂದಿನ ತನಕ ನೀವು ಕ್ಷಮಿಸುವುದಿಲ್ಲವೋ ಅಂದಿನ ತನಕ ಈ ಹೃದಯಕ್ಕೆ ಶಾಂತಿ ದೊರೆಯದು.'

'ನೀವೇನನ್ನುತ್ತಿರುವಿರಿ?' ಅತ್ತಿಗೆಯು ಮೋಹನ ತಲೆಯನ್ನೆತ್ತುತ್ತಾ ಪ್ರೀತಿಯಿಂದ ಪ್ರಶ್ನಿಸಿದಳು.

ಮೋಹನನ ಹೃದಯವು ಇನ್ನೂ ಜೋರಾಗಿ ಬಡಿಯತೊಡಗಿತು. ಆವನಂದನು- 'ಅತ್ತಿಗೆ ನಾನು ನಿಮ್ಮ ಮುಖ ನೋಡಲು ಯೋಗ್ಯನಲ್ಲ. ನಾನು....ಅಂದಿನ ರಾತ್ರಿ....'

ಅತ್ತಿಗೆಯು ಅರ್ಧದಲ್ಲೇ ಅಂದಳು- 'ಹ್ಞಾಂ! ಹಾಂ! ನಾನರಿತಿರುವೆನು. ಆ ರಾತ್ರಿ ನೀವು ಎಲ್ಲಿಂದ ಎಲ್ಲಿಗೆ ಮುಟ್ಟಿದ್ದೀರಿ. ಆದರೆ ಅಂದು ಕ್ರಿಸ್‌ಮಸ್ ರಾತ್ರಿಯಾಗಿದ್ದಿತು. ನಿಮಗೆ ನನ್ನ ವಿಷಯದಲ್ಲಿ ದುರ್ಭಾವನೆಗಳು ಬಂದಿದ್ದುವು. ಅಂತೇ ನೀವು ಬಗುಳಿದಿರಿ. ಆದರೆ ನಾನು ಬಗುಳಲಿಲ್ಲವಷ್ಟೆ? ಅದಕ್ಕಾಗಿ ಆ ರಾತ್ರಿಯನ್ನು ಮರೆತು ಬಿಡಿ. ನಿಮ್ಮ ಅತ್ತಿಗೆ ಹೇಗೆ ನಡತೆಯಲ್ಲಿರುವಳೋ ಹಾಗೆಯೇ ಮನದಲ್ಲೂ ಇರುವಳು. ಈ ಹೃದಯ ನಿರ್ವಂಚನೆ, ನಿಸ್ಸಂದೇಹ, ನಿಃಸ್ವಾರ್ಥದಿಂದಿದೆ. ಆದರೆ ನೆನಪಿಡಿ ಲಂಬೋದರ ರಾಯರೇ! ನೀವು ಮನಕೊಟ್ಟು ಕಲಿಯದೆ, ವಿದ್ಯೆಯು ಒಂದು ವೇಳೆ ಹಾಳಾಗಿ ಹೋದರೆ ನಾನು ನಿಮ್ಮನ್ನೆಂದೂ ಮನ್ನಿಸೆನು; ಅಲ್ಲದೆ ಒಂದೇ ಒಂದು ಮಾತನ್ನು ಸಹ ಆಡಲಾರೆನು. ಹೋಗಿ; ಹೊತ್ತಾಯಿತು; ಗಾಡಿ ತಪ್ಪೀತು.'

ಮೋಹನನ ಹೃದಯವು ತಣಿಯಿತು. ಅವನತ್ತಿಗೆಯು 'ಲಂಬೋದರ'ನೆಂಬ ಹೆಸರಿನಿಂದಲೇ ಅವನನ್ನು ಕಳುಹಿಸಿ ಕೊಡುತ್ತಿದ್ದಾಳೆ. ಅವಳ ಮನದ ಸ್ವಚ್ಛತೆಯಲ್ಲಿ ಯಾವ ಕಲ್ಮಷವೂ ಇಲ್ಲ; ಅವನ ಮೇಲವಳಿಗೆ ಯಾವ ದ್ವೇಷವೂ ಇಲ್ಲ. ಇದೀಗವನಿಗೆ ಖಚಿತವಾಯಿತು. ಅವನು ಮತ್ತೊಮ್ಮೆ ಆಕೆಯ ಪಾದಗಳಿಗೆ ನಮಸ್ಕರಿಸಿದನು.

---




# ರೂ - ಆ - ಪೈ

ಅಥವಾ

# ಭಂಡವಳದ ಬಂಧನ







ಬರೆದವರು:

ಶ್ರೀ| ಎಂ. ವಿ. ಹೆಗ್ಡೆ




ಪಾತ್ರಗಳು—

ಮೂಲಧನ ರೂಪಾಯಿ.

ಮಾರ್ಕೆಟಗೆ ಹೋಗಿ ಬಂದಿದ್ದ ಎಂಟಾಣೆ, ನಾಲ್ಕಾಣೆ, ಎರಡಾಣೆ, ಒಂದಾಣೆ, ಅರ್ಧಾಣೆ, ಪಾವಾಣೆ, ಪೈ.



ಸ್ಥಳ:

ಜಿಪುಣ ಧನವಂತನೊಬ್ಬನ ಖಜಾನೆ.

(ಧನಾಧಿಪತಿಯೊಬ್ಬನ ಖಜಾನೆ. ರಾತ್ರಿ ನಿದ್ರೆ ಬಾರದೇ ಇದ್ದಾದರೆ ಅವನಿಗೆ ತನ್ನ ಭಂಡಾರವನ್ನು ನೋಡದೆ ಆಗದು; ಪದ್ಧತಿಯಂತೆ ಅನುಕ್ರಮವಾಗಿ ಕಬ್ಬಿಣದ ಪೆಟ್ಟಿಗೆಯ ಹೊರಬಾಗಿಲು, ಒಳಬಾಗಿಲು, ಅದರೊಳಬಾಗಿಲು ತೆರೆಯಲ್ಪಡುವದು. ನಾಣ್ಯಗಳ ಬೊಕ್ಕಸವು 'ಗಿಝೀಲು' ಶಬ್ದಕೊಡುವದು; ಚೀಲವು ಮೊದಲಿನ ಸ್ಥಾನದಲ್ಲಿರಿಸಲ್ಪಡುವವರೆಗೂ ನಾಣ್ಯಗಳ ಕಿಚಿ ಕಿಚಿ ಶಬ್ದ ನಡೆದೇ ಇತ್ತು. ಅವು ಮಾತಾಡಿಕೊಂಡದ್ದೇನು?)

---

ಅರ್ಧಾಣೆ— (ಎರಡಾಣೆಯ ಪಾವಲಿಯನ್ನೊಮ್ಮೆ ದೂಡಿ)-ನಿನಗೆ ನಾಲ್ಕು ಮೂಲೆಗಳು ದೊರೆತಿರುವದು ಹೀಗೆ ಅನ್ಯರನ್ನು ತಿವಿಯಲಿಕ್ಕಲ್ಲ. ದಿನಂಪ್ರತಿ ಇದೇ ಅವಸ್ಥೆ!

ನಾಲ್ಕಾಣೆ ಪಾವಲಿ— (ತನಗೆ ಬಂದು ಢಿಕ್ಕಿ ಹೊಡೆದ ಎರಡಾಣೆಯನ್ನು ಹಿಂದಕ್ಕೆ ದೂಡಿ) ಅವ ದೂಡಿದನೆಂದು ಬಂದು ನನಗೇಕೆ ಹಾಯುತ್ತಿ? ಸುಮ್ಮಗೆ ನಿನ್ನಷ್ಟಕ್ಕೆ ನಿನಗಿರಲಿಕ್ಕಾಗದೇ?

ಎರಡಾಣೆ— ಏನಪ್ಪಾ ಇದು? ನಾನು ದೂಡಿದ್ದೆಲ್ಲಿ? ಇಂತಹ ಸಮೂಹದಲ್ಲಿ ಒಬ್ಬರ ಮೈಗೊಬ್ಬರು ತಾಗದಿರುವದೆಂದರೆ ಹೇಗೆ? ಸಿನೆಮಾ, ಜಾತ್ರೆಗಳಾವುದಕ್ಕೂ ಹೋಗದವರ ಹಾಗೆ ಮಾಡುತ್ತೀರಲ್ಲಾ?

ನಾಲ್ಕಾಣೆ ಪಾವಲಿ— ಓಹೋ! ನೀನೊಬ್ಬ ಸಿನೇಮಾ ಟಿಕೇಟು ಆಫೀಸಿಗೆ ನುಗ್ಗಿ ಹೊರಡುವ ಅಭ್ಯಾಸ ಮಾಡಿದವ; ಬಾಕಿಯವರಿಗೆ ಅಲ್ಲಿಯ ಸಂಗತಿಯೇ ತಿಳಿಯದೆಂಬ ಠೇಂಕಾರವೆ? ಅಲ್ಲಿ ಹೋಗಿ ನನಗೂ ಗೊತ್ತುಂಟು ಮಹಾರಾಯಾ!

ಅರ್ಧಾಣೆ— ಸಿನೇಮಾ ಟಿಕೇಟಾಫೀಸಿನಲ್ಲಿ ಒಂದು ದಿನ ಎಲ್ಲರೊಡನೆ ನುಗ್ಗಿ ನುಸಿದುಕೊಂಡು ಇದ್ದವ ಮರುದಿನವೇ ಹೊರಟು ಇತ್ತ ಬಂದಿದ್ದೀಯೆ. ಒಂದು ದಿನದ ಅಪರಾಧವನ್ನು ಅಲ್ಲಿಯವರು ಕ್ಷಮಿಸಿರಬಹುದು. ಆದರೆ ಇಲ್ಲಿ ಪ್ರತಿದಿನ ಹೀಗೆ ನುಗ್ಗಾಟ ಮಾಡುತ್ತಾ ನಿಂತರೆ ನಾವು ಸಹಿಸುವಂತಿಲ್ಲ. (ದೂಡುವನು. ಈ ದೂಡಾಟದಿಂದ, ಇದ್ದ ನಾಣ್ಯಗಳೊಳಗೆಲ್ಲಾ ಚಕಮಕಿಯಾಗುವದು.)

ಪೈ- (ರಾಶಿಯ ಅಡಿಯಿಂದ) ಅಯ್ಯೋ! ದೊಡ್ಡವರ ಈ ಕುಸ್ತಿಯಿಂದ ನಾನು ಅಡಿಗೆ ಬಿದ್ದು ಸತ್ತೆನಲ್ಲಾ. ನಾನಿಂಥಾ ಹೊಡೆತಗಳನ್ನು ತಿಂದವನೇ? ಆ ಮಹರಾಯ (ಭಿಕ್ಷುಕ)ನ ಬೈರಾಸು ತುದಿಯಲ್ಲಿ ಛಳಿಗಾಳಿ ಕಾಣದ ರಾಜಕುವರಿಯಂತೆ ಇದ್ದ ನನ್ನ ಅದೃಷ್ಟ ಇಂದು ಎಲ್ಲರ ಕಾಲಡಿಗೆ ಬಿದ್ದು ಹೊರಳುವಲ್ಲಿಗೆ ಬಂತೆ?

ಪಾವಾಣೆ- ವಸ್ತ್ರ ಕವಚಧಾರಿಯಾಗಿದ್ದವನು ನೀನೊಬ್ಬನೇ ಅಲ್ಲ. ಆ ಪುಣ್ಯಾತ್ಮ (ದಕ್ಷಿಣೆವಾಲ) ಹಲವು ದಿನಗಳ ವರೆಗೆ ನನ್ನನ್ನು ಸೊಂಟದ ವಸ್ತ್ರದಿಂದ ಹೊರಗೆ ಬಿಟ್ಟಿರಲಿಲ್ಲ. ಅವ ಹೊಳೆದಾಟುವಾಗ, ಮೈಲುಗಟ್ಲೆ ನಡೆಯುವಾಗ, ಹಣ್ಣು ಹೂಗಳ ಅಂಗಡಿಯೆದಿರು ಮುತ್ತಿನಂತಹ ಮಾತುಗಳನ್ನಾದರೂ ಸುರಿಸಿದ್ದ-ನನ್ನನ್ನು ಮಾತ್ರ ಹೊರಗೆ ಹಾಕಿರಲಿಲ್ಲ. ಆದರೆ ಗ್ರಹಚಾರ, ಒಂದು ಬೊಟ್ಟು ಕಣ್ಣೀರಿನೊಡನೆ ಅವ ನನ್ನನ್ನಿಲ್ಲಿಗೆ ಕಳುಹಿಕೊಡಬೇಕಾಗಿ ಬಂತು. ಇಲ್ಲಿ ಯಾವ

ಕಡೆಗೂ ಹೋಗಲಿಕ್ಕಿಲ್ಲದೆ ಇದ್ದವರ ವೈಸ್ಪರ್ಧೆ ನಡೆಸಿ ಸವೆಯುವ ದುರ್ಗತಿ ಬಂತಲ್ಲಾ!

ಎಂಟಾಣೆ- ಪಾವಾಣೆ, ಪೈಗಳೇ! ನೀವು ಹೊರಗಿಣಿಕಿದುದಿದ್ದರೆ ಬೀಡಾ ಬೀಡಿ ಅಂಗಡಿಯಿಂದಿರಿ; ಕಡವು ಅಡ್ಡ ದೋಣಿಯವನ ಸಮಕ್ಷಮದಲ್ಲಿ ಮಾತ್ರ. ನಾನು ಅರಿವೆಯಂಗಡಿ ತಿರುಗಿದವ; ಪಾಕೀಟಿನೊಳಗೆ ಸೇರಿದ್ದವ: ನಿಮ್ಮಲ್ಲೊಬ್ಬನಿಗಿಂತ ೯೬ ಪಾಲಷ್ಟು ಮತ್ತೊಬ್ಬನಿಗಿಂತ ೩೨ ಪಾಲಷ್ಟು ದೊಡ್ಡವನಾದ ನಾನು ಈಗ ಎಲ್ಲರೊಡನೆ ಶಿಕ್ಯಾಟಕ್ಕೆ ಸಿಕ್ಕಿದ್ದೇನಲ್ಲಾ! ಇಲ್ಲಿ ವರ್ಗಭೇದ ಕೂಡ ಇಲ್ಲದ ಕಲಿಕಾಲವೇ ಕಂಡು ಬರುತ್ತದಲ್ಲಾ-ನನ್ನ ಗ್ರಹಚಾರಕ್ಕೇನೆನ್ನಬೇಕು ಹೇಳಿ.

(ಮಾತುಕತೆಗಳು ಒಬ್ಬರನ್ನೊಬ್ಬರು ದೂಡುತ್ತಿದ್ದಂತೆಯೇ ನಡೆಯುವವು; ರೂಪಾಯಿಗೂ ಬಂದು ತಾಗಿದಾಗ ರೂಪಾಯಿ ಬಾಯಿ ಬಿಡುವದು.)

ರೂಪಾಯಿ- ತಮ್ಮಗಳಿರಾ! ಎಂಟಾಣೆ, ನಾಕಾಣೆ, ದೋನಾಣೆ, ಆಣೆ, ಅರ್ಧಾಣೆ, ಪಾವಾಣೆ ಪೈಗಳಿರಾ! ಇತ್ತ ಕೇಳಿ. ನಿಮ್ಮೆಲ್ಲರಿಗೆ ವಿರಾಟ್ರೂಪನು ನಾನು. ನೀವೆಲ್ಲಾ ನನ್ನಲ್ಲಿ ಅಡಕವಾಗಿದ್ದೀರಿ. ನಿಮಗಿಂತ ಹಲವು ಪಾಲಿಗೆ ನಾನು ದೊಡ್ಡವ-ಅಂತೆಯೇ ನಿಮಗಿಂತ ಹಲವು ಪಾಲು ಹೆಚ್ಚಿನ ಸಂಕಷ್ಟವನ್ನನುಭವಿಸಿದವ. ನಾನೀ ಸ್ಥಳಕ್ಕೆ ಬಂದು ಸೇರಿದುದು ಕಳದ ಶತಮಾನದಲ್ಲಿ. ನನ್ನನ್ನು ಇದೇ ಸ್ಥಳದಲ್ಲಿ ಎರಡು ಮೂರು ಕೈಗಳು ಎತ್ತಿ ಆಡಿಸಿವೆ. ನೀವು ಹೊರಗೆ ಹಲವು ಕೈಗಳಲ್ಲಿ ಸುತ್ತಾಡಿ ಇಲ್ಲಿಗೆ ಬಂದಿರಬಹುದು. ಆದರೆ ನಾನು ಇದೇ ಸ್ಥಳದಲ್ಲಿ ಸರ್ತಿ ಪ್ರಕಾರ ಮೂರು ಕೈಗಳ ಸ್ಪರ್ಶ ಸುಖವನ್ನೋ ದುಃಖವನ್ನೋ ಪಡೆದು ಎಷ್ಟೋ ವರುಷಗಳಿಂದ ನಿಮ್ಮಂತಹ ಸಾವಿರಾರು ಮಂದಿಯೊಡನೆ ಉರುಡಾಡಿ- ಇಗೋ ನೋಡಿ-ನನ್ನ ಮೈಯೊಂದು ಬದಿಯಲ್ಲಿ ಕಪ್ಪುಗಟ್ಟಿ ಹೋಗಿದೆ. ಆದರೂ ಬಿಡುಗಡೆಯಿಲ್ಲ. ಇದು ಅನಿವಾರ್ಯ ಅಪತ್ತಾದರೂ ಒಂದಲ್ಲೊಂದು ದಿನ ಬಂಧನ ನಿವಾರಣೆಯಾಗಲಿದೆ ಎಂಬ ಒಂದೇ ಆಶೆ ಕಟ್ಟಿಕೊಂಡಿದ್ದೇನೆ,- ಅಜ್ಜ, ತಂದೆ, ಮಗ-ಸರ್ತಿಪ್ರಕಾರ ಎತ್ತಿದಾಗಲೆಲ್ಲಾ 'ಠಣ್' ಎಂದು ಅದೇ ಆಶೋದ್ಗಾರವೆತ್ತಿದ್ದೇನೆ. ಲೋಕದಲ್ಲಿ 'ಸಾಮೂಹಿಕ ಬಂಧನ ಗೃಹ'ಗಳೆಷ್ಟೋ ಇವೆ. ಅವುಗಳಲ್ಲಿ ಅತ್ಯಂತ ಕಳತೆಯದೊಂದರಲ್ಲಿ ನಾವಿಂದು ಸೇರಿದ್ದೇವೆ- ಸಮಾನ ಸಂಕಷ್ಟಕ್ಕೊಳಗಾಗಿದ್ದೇವೆ- ಎಂಬ ಸಮಾಧಾನದಿಂದ ಸುಕಾಲವನ್ನು ಹಾರೈಸಿ ಸುಮ್ಮನಿರಬೇಕೇ ಹೊರತು ನಾವೇ ನಮ್ಮೊಳಗೆ 'ಕಚಕಚ'ಮಾಡಿಕೊಳ್ಳುವದೇಕೆ? ತಮ್ಮಗಳಿರಾ! ನಮ್ಮ ಈ ಶಬ್ದ ಕೇಳಿಯಾದರೂ ಹೊರಗಿನವರು ಬಂಧನ ನಿವೃತ್ತಿಪಡಿಸಲು ಬಂದಾರೆನ್ನೋಣವೆ? ಈ ನೆಲೆಯೆಷ್ಟು ಗಟ್ಟಿನಲ್ಲಿದೆ ಎಂಬುದನ್ನು ಬಲ್ಲಿರಾ-ನೋಡಿ- ಸೂರ್ಯಬೆಳಕು ಬೀಳಲೆಡೆಯಿಲ್ಲದ ಈ ಸ್ಥಳಕ್ಕೆ ಅನ್ಯರ ಕಣ್ಣ ಬೆಳಕು ಬೀಳಲೆಡೆಯೆಲ್ಲಿ?

ಆಣೆ— ಹಿರಿಯಣ್ಣಾ! ಕಳದ ಎರಡು ತಲೆಗಳಾರಭ್ಯ ನೀನು ಇಲ್ಲಿಯೇ ಇದ್ದೇನೆನ್ನುತ್ತೀ. ಹಾಗಾದರೆ ನಮ್ಮ ಬಿಡುಗಡೆ ಯಾವಾಗಣ್ಣಾ? ಮತ್ತು ಹೇಗಣ್ಣಾ?

ರೂಪಾಯಿ- ಆಣೆ! ನಿನ್ನಾಣೆ ನಮಗೊಂದು ದಿನ ಬಿಡುಗಡೆಯಿದೆ. ಅದಕ್ಕೆ ಕಾರಣ ಹೇಳುತ್ತೇನೆ. ತಮ್ಮಗಳಿರಾ! ಎಲ್ಲರೂ ಇತ್ತ ಕೇಳಿ. ಈಗಿನ ನಮ್ಮ ಬಂಧನಕಾರನ ಅಜ್ಜ ನನ್ನನ್ನು ಪ್ರಥಮತಃ ಎಲ್ಲಿಂದ ತಂದ ಸೊತ್ತೆ? ನಾನು ಅನ್ಯರ ಮನೆಯಲ್ಲಿದ್ದೆ. ಆ ಮನೆಯ ಗೋಡೆಯಲ್ಲಿ ಬಾಗಿಲು ಪೆಟ್ಟಿಗೆಯೊಡೆದು ಒಳಗಿದ್ದ ನನಗೆ ಕೈಕೊಟ್ಟದ್ದ. ಆ ಮನೆಯವನ ಮಕ್ಕಳುಮೊಮ್ಮಕ್ಕಳ ಕೈಯಲ್ಲಿ ನಲಿದಾಡುವ ಅದೃಷ್ಟ ನನ್ನದಿತ್ತು. ಹೀಗೆ ಅನಿರೀಕ್ಷಿತವಾಗಿ ಇಲ್ಲಿ ಬಂದು ಸೇರಿದ್ದರಿಂದ ಬಂಧನವೇ ಗತಿಯಾಯಿತು. ಸ್ವಲ್ಪ ಆಲೋಚಿಸಿಕೊಳ್ಳಿ ನನ್ನ ಮೂಲದ ಒಡೆಯ ನನ್ನನ್ನು ಬಂಧನದಲ್ಲಿಯೇ ಇಟ್ಟಿದ್ದ; ಅಲ್ಲಿಂದ ಬಿಡುಗಡೆಯಾಯಿತು. ಆದರೂ ಇಲ್ಲಿ ಕೂಡಾ ಬಂಧನವೇ ಆಗಿದೆ. ಬಂಧನಕ್ಕೊಂದು ಬಿಡುಗಡೆ ಎಂಬುದುಂಟೇ ಉಂಟು. ನಾವು- ನಾಣ್ಯ ಜಾತಿಯವರು- ಅತ್ತಿಂದಿತ್ತ ತಿರುಗಾಡಲು ಹುಟ್ಟಿದವರು, ಗಸ್ತಿಗಿಟ್ಟ ಸೋಲ್ಜರರಂತೆ! ಆ ಕ್ರಮಕ್ಕೆ ವಿರುದ್ಧವಾಗಿ, ಎಲ್ಲಿಯಾದರೂ ಕುಳಿತು ಬಿಟ್ಟರೆ ನಮ್ಮ ತಪ್ಪಿಗಾಗಿ

ಅಲ್ಲಿಂದ ವರ್ಗವಾಗುವದು ಖಂಡಿತ. ಆದ್ದರಿಂದ ಇಲ್ಲಿಂದ ನಾವು ಟ್ರಾನ್ಸ್ಫರ್ ಆಗಲಿದ್ದೇವೆ ಎಂಬುದನ್ನು ಖಂಡಿತ ತಿಳಿದುಕೊಳ್ಳಿ. ನನ್ನ ಮಾತಿನಲ್ಲಿ ವಿಶ್ವಾಸವಿಡಿರಿ. ನಿಮ್ಮೆಲ್ಲರಿಗೆ ಹಿರಿಯನು ನಾನು. ಗುಟ್ಟು ಹೇಳುವದಾದರೆ ಇಲ್ಲಿ ಬಂದು ನಿಮ್ಮನ್ನೆಲ್ಲಾ ಹುಟ್ಟಿಸಿದವನೇ ನಾನು! ಕಲಿಕಾಲದ ಮರಿಗಳೇ! ನಿಮ್ಮ ಜನಕನಾದ ನನ್ನ ಮಾತಿನಲ್ಲಿ ವಿಶ್ವಾಸವಿಡಿರಿ.

ಎಂಟಾಣೆ- ಅಪ್ಪಾ, ನಿಜ. ನಿಜ. ನಾನೂ ಇಲ್ಲಿಗೆ ಬರುವ ಮೊದಲು ಇಷ್ಟು ಕಠಿಣವಲ್ಲವಾದರೂ ಒಂದು ವಿಧದ ಬಂಧನದಲ್ಲಿಯೇ ಇದ್ದೆ. ಕಿಸೆ, ಕಿಸೆಯೊಳಗೆ ಪಾಕೀಟು, ಆ ಪಾಕೀಟಿನೊಳಗೆ ನಾನೂ ತಮ್ಮಂದಿರು ಕೆಲವರೂ ಇದ್ದೆವು. ಆದರೆ ಮೊದಲಿನ ಒಡೆಯನು, ಸಭೆಗೂಡಿಸಿದಂತೆ ನಮ್ಮನ್ನೆಲ್ಲಾ ಬೇರೆ ಬೇರೆ ಕಡೆಗಳಿಂದ ಕರತಂದು ಒಂದು ಘಂಟೆ ಪಾಕೀಟಿನಲ್ಲಿ ಒಟ್ಟು ಸೇರಿಸಿದ್ದ ಮಾತ್ರ. ಅಷ್ಟರಲ್ಲಿ ಒಂದು ಕಾಗದದ ಚೂರು ಬಂದು ಪಾಕೀಟಿನೊಳಗೆ ಸೇರಿತು- ನಾವಲ್ಲಿಂದ ಹೊರಟು ಇಲ್ಲಿ ಬಂದು ಸೇರಿದೆವು. ಅಪ್ಪಾ- ನನಗೀಗ ಹಿಂದಿನ ಸಂಚಾರ ಸ್ವಾತಂತ್ರ್ಯ ದೊರೆಯಲೆಂಬ ಆಶೆ ಬಹಳವಾಗುತ್ತಿದೆಯಲ್ಲಾ!

ರೂಪಾಯಿ- ನಿಜ. ನಿನ್ನಲ್ಲಿ ಆ ಆಶೆಯಿದೆ. ನಿನ್ನನ್ನು ಕಳುಹಿಕೊಟ್ಟ ಒಡೆಯನಿಗೆ ಬಂದ ಕಾಗದದಲ್ಲಿ 'ಇದ್ದ ವ್ವನ್ನಾದರೂ ಕಳುಹದಿದ್ದರೆ ಕೋರ್ಟಿಗೆ ಹೋಗುತ್ತೇನೆ' ಎಂಬ ಹುಕುಂ ಬಂದದ್ದರಿಂದಲೇ ಅವ ನಿಮ್ಮನ್ನು ಹೊರಡಿಸಿದ. ಅವನಲ್ಲಿಯೂ ನಿಮ್ಮನ್ನು ಕಳಕೊಂಡದ್ದಕ್ಕಾಗಿ ಪಶ್ಚಾತ್ತಾಪವಿದ್ದೇ ಇದೆ. ಹೀಗೆ ನಿಮಗೂ ಹಿಂದಿನ ಒಡೆಯನಿಗೂ ಹೃದಯ ಸಂಬಂಧ ಕಡಿದು ಹೋಗಿಲ್ಲವಷ್ಟೆ. ಇರಲಿ, ಮಗೂ ಪಾವಣೆ! ಇಲ್ಲಿಗೆ ಬರುವ ಮೊದಲಿನ ನಿನ್ನ ಚರಿತ್ರೆಯೇನು?

ಪಾವಣೆ- ಅದನ್ನೇನೆನಲಿ ಅಪ್ಪಾ! ನಾನು ಯಾವ ಬದಲಿಯೂ ಇಲ್ಲದೆ (ದಕ್ಷಿಣೆಯ ರೂಪದಲ್ಲಿ) ಒಬ್ಬ ಸಜ್ಜನನ ಕಿರುವಂಟಿಗೆ ಸೇರಿದ್ದೆ. ನನ್ನ ಜಾತಿಯ ಇನ್ನು ಕೆಲವರನ್ನು ಒಳಹೊಗಿಸಲಿಕ್ಕಿಲ್ಲದೆ, ಹೊರಗೆ ಕಳುಹಲಿಕ್ಕೆ ಅವ ನಮ್ಮ ಸ್ಥಾನವನ್ನು ಬಿಡಿಸಿದವನೇ ಅಲ್ಲ. ಈ ಮನುಷ್ಯನಿಗೆ ಒಂದು ದೇವಸ್ಥಾನದಲ್ಲಿ ಪಾತ್ರಿಯ ಕೆಲಸವಿತ್ತು ನೋಡಿ. ಆ ಕೆಲಸ ಮುಗಿದಾಗಲೆಲ್ಲಾ ಇನ್ನಷ್ಟು ಮಂದಿ ನಮ್ಮ ಸ್ಥಾನದಲ್ಲಿ ಸೇರುತ್ತಿದ್ದರು. ಆದರೆ ಒಂದು ದಿನ ದರ್ಶನದ ಹೊತ್ತಿನಲ್ಲಿ ಏನೋ ತಪ್ಪು ಮಾಡಿದನಂತೆ. ದೇವರಿದಿರು ದರ್ಶನ ಮುಗಿದ ಮೇಲೂ ಆ ದೇವರೊಡೆಯನಾದ ನಮ್ಮ ಇಂದಿನ ಒಡೆಯನ ಅಬ್ಬರದಿದಿರು ಪಾತ್ರಿ ಕೆಲಹೊತ್ತು ನಡುಗಿದ- ಕಿರುವಂಟಿಗೆಯಲ್ಲಿದ್ದ ನಾವು ಕಿರಿಚಿಕೊಳ್ಳುವ ವರೆಗೂ ನಡುಗಿದ! ಆ ಮೇಲೆ ನಮ್ಮನ್ನು ಬಿಡಿಸಿ ಕಣ್ಣೀರಿನೊಂದಿಗೆ ಈ ಮನುಷ್ಯನ ವಶಕ್ಕೊಪ್ಪಿಸಿದ. ಅಲ್ಲಿಂದ ದೇವಳದ ಹರಿವಾಣದಲ್ಲಿದ್ದ ನಮ್ಮವರು ಕೆಲವರನ್ನು ಕೂಡಿಕೊಂಡು ಇಲ್ಲಿ ಬಂದು ಬಿದ್ದೆನು. ಅಂದಿನವನ ಕಣ್ಣೀರ ಕಲೆ ಈಗಲೂ ನನ್ನ ಮೈಯಲ್ಲಿದೆ. ಇಲ್ಲಿಯ ತಿಕ್ಕಾಟದಿಂದ ಮೈ ಬೇಗೆಯೇಳುವಾಗಲೆಲ್ಲಾ ಅವನ ಅಭಿಷೇಕದ ನೆನಪು ಮೂಡುತ್ತದೆ; ಹೃದಯವದನ್ನೇ ಆಶಿಸುತ್ತದೆ. ಆದರೆ....

ಪೈ- ನಿನ್ನ ಚರಿತ್ರೆಯಲ್ಲೇನುಂಟು ಅಂತಹ ಮಹತ್ವ? ಕೇಳು-ನನ್ನ ಜಾತಿಯವರು ಹಲವರೊಂದಿಗೆ ನಾವೊಂದು ಗೆರಟೆವಾಲ (ಭಿಕ್ಷುಕ)ನಲ್ಲಿ ಜಮೆಯಾಗಿದ್ದೆವು. ಅವ ಹಲವು ಮನೆಗಳಿದಿರು ನಮ್ಮನ್ನು ಗೆರಟೆಯಲ್ಲಿ ತೂಗುಯ್ಯಾಲೆಯಾಡಿಸಿದ್ದ. ಅಷ್ಟರಲ್ಲಿ ಬಂತು ದುರ್ದೆಶೆ ಈಗಿನ ಒಡೆಯನ ಮನೆಯಿದಿರು. ಹೋಗಬಾರದ ಸ್ಥಳಕ್ಕೆ ಹೋಗುವ ದುರ್ಬುದ್ಧಿ ಅವನಿಗೇಕೆ ಬರಬೇಕಿತ್ತು? ಅಲ್ಲಿಯ ಜವಾನರು ಅವನನ್ನು ದೂಡಿದರು. ನಾವು ಗೆರಟೆಯಿಂದ ಹಾರಿ ಅಂಗಳಕ್ಕೆ ಬಿದ್ದೆವು. ಅಲ್ಲಿಯೂ ಗೆರಟೆವಾಲನ ಕೈಗಳು ನಡುಗುತ್ತಾ ನಮ್ಮನ್ನೆತ್ತಿಕೊಳ್ಳಲು ಬರುತ್ತಿದ್ದುವು. -ಅಯ್ಯೋ! ಅವನ ಆ ಮಮತೆ ನಾವು ಮರೆಯುವಂತಹದಲ್ಲ. ಆದರೆ ಜವಾನರು ಎತ್ತಲು ಬಿಡದೆ ದೂರಕ್ಕೆ ದೂಡಿಬಿಟ್ಟರು. ನಾವೀ ಬೊಕ್ಕಸದೊಳಗೆ ಬಂದು ಬಿದ್ದೆವು. ಅವನ ಪ್ರೇಮವನ್ನು ನಾವು ಮರೆಯುವಂತುಂಟೆ?

ರೂಪಾಯಿ- ಮಕ್ಕಳಿರಾ! ಅರ್ಥವಾಯಿತು. ನಮ್ಮದಿದು ನಿಜವಾದ ಬಂಧನ ಹೊರತು ಸಂಬಂಧವಲ್ಲ. ನಿಮ್ಮ ಸಂಬಂಧಿಕರು, ಹಕ್ಕುದಾರರು-ಅನ್ಯಥಾ

ಇರುವರೆಂಬುದು ಸ್ಪಷ್ಟವಾಯಿತು. ನಾವು ಹೀಗೆ ಮೇಲೆ ಮೇಲೆ ಬಿದ್ದು ಹೊರಳಾಡಿಕೊಂಡಿರುವವರಲ್ಲ; ಕೈಯಿಂದ ಕೈಗುಲ್ಲಂಘಿಸುವ, ಪ್ರಪಂಚದ ಚಟುವಟಿಕೆ ಹೆಚ್ಚಿಸುವ ಅಧಿಕಾರವುಳ್ಳವರೆಂಬುದು ಸ್ಪಷ್ಟ. ಈ ಎಲ್ಲಾ ಕಾರಣಗಳಿಂದ ನಮ್ಮ ಇಂದಿನ ಬಂಧನವು ಅತಿ ದೊಡ್ಡ ಅನ್ಯಾಯವೆಂಬುದೂ ಸ್ಪಷ್ಟ. ಲೋಕದ ಹಲವು ವಿಧದ ಬಂಧನಗಳು ನಮಗಾಗಿ ಹಾಗೂ ನಮ್ಮಿಂದಾಗಿ ತೊಲಗಿ ಹೋಗಿವೆ. ಸ್ವತಃ ನಮ್ಮ ಬಂಧನಕ್ಕೊಂದು ನಿವಾರಣೆಯಿರಲಾರದೆ? ಇದ್ದೇ ತೀರಬೇಕು. ಆದ್ದರಿಂದ ಧೈರ್ಯಗೊಳ್ಳಿರಿ. ತತ್ಕಾಲಕ್ಕೆ ಎಲ್ಲರೂ ಮೌನವಾಗಿ ಇದ್ದು ಬಿಡೋಣ.

(ಅಷ್ಟರಲ್ಲಿ ಬೊಕ್ಕಸದ ಬಾಗಿಲು ಮುಚ್ಚಲ್ಪಟ್ಟು ಚೀಲವು ಸ್ಥಾನದಲ್ಲಿರಿಸಲ್ಪಡುವಾಗ 'ಗಿರೀಲ್' ಶಬ್ದವಾಗುವದು. ಅಂದರೆ ನಾಣ್ಯಗಳೆಲ್ಲಾ ಒಟ್ಟಾಗಿ ''ನಾಣ್ಯ ಸ್ವಾತಂತ್ರ್ಯಕೀಜೈ' ಎಂಬ ಜಯಘೋಷ ಮಾಡುವವು. ಪೆಟ್ಟಿಗೆಯ ಬಾಗಿಲು 'ಮುಚ್ಚಲ್ಪಡುವದು.)

೨

(ಧನಿಕನ ಚೀಲ ಹಿಮಾಲಯದಂತೆ ನಿಂತಿರುವಾಗ ಕಾಲಚಕ್ರ ಉರುಳುತ್ತಲೇ ಇದೆ; ಕೊನೆಯ ದಿನಗಳಲ್ಲಿ ಕ್ಷಣ ಕ್ಷಣಕ್ಕೆಂಬಂತೆ ನಾಣ್ಯಗಳು ಬಂದು ಚೀಲದೊಳಗೆ ಸೇರುತ್ತಲೇ ಇರುವವು. ಕಚ ಕಚ ಶಬ್ದ ದಿನಕ್ಕೆ ಹತ್ತು ಹಲವು ಬಾರಿ! ಚೀಲದೊಳಗೆ ವ್ಯೆಯುಲುಗ ದಷ್ಟು ಒತ್ತಾಟ. ನಾಣ್ಯಗಳು ಕೆಲವು ಪುನಃ ಬಂದು ಸೇರಿದಾಗ-)

ಮೂಲರೂಪಾಯಿ- ಈಗ ಬಂದವರೇ ನೀವಾದರೂ ಯಾರನ್ನಾದರೂ ಹೊರಗೆ ಕಳುಹಲು ಬಂದಿರಾ? ಅಥವಾ ಮಿಕ್ಕವರಂತೆಯೇ ಇಲ್ಲಿಯ ಉಬ್ಬಸವನ್ನು ಹೆಚ್ಚಿಸುವ ಪಾಪ ಮಾಡಲು ಆಗಮಿಸಿದಿರಾ?

ಬಂದ ನಾಣ್ಯಗಳು- ಅಣ್ಣಾ! ನಾವು ಯಾರನ್ನೂ ಕಳುಹಲಾರೆವು. ನಮಗೆ ಎಮರ್ಜೆಂಟ್ ಕರೆ ಬಂದುದರಿಂದ, ನಮ್ಮ ಹಲವು ಕಾರ್ಯಕ್ರಮಗಳನ್ನು ರದ್ದುಪಡಿಸಿ ಇಲ್ಲಿ ಬಂದೆವು.

ರೂಪಾಯಿ- ಠೀಕ್ ಠೀಕ್! ಈಗೀಗ ಅರ್ಧದಲ್ಲೇ ತಿರುಗಾಟವನ್ನು ನಿಲ್ಲಿಸಿ ಎಲ್ಲರೂ ಇಲ್ಲಿ ಬಂದು ಸೇರುತ್ತಿರುವರಲ್ಲಾ. ತಮ್ಮಗಳಿರಾ! ನೀವು ಹೊರಗೆ ಸುತ್ತಾಡಿ ಬಂದವರು. ನಿಮ್ಮ ಸುತ್ತಾಟವು ಫಕ್ಕನೆ ರದ್ದಾಗುವಂತಹ ವಿಪತ್ತು ಅಲ್ಲಿ ಏನು ಬಂತು - ತುಸು ಹೇಳುವಿರಾ?

ನಾಣ್ಯಗಳು- ಅಣ್ಣಾ ವಿಪತ್ತು ಬೇರಾವುದು? ನಾವೆಂದರೇನೆ ಸಂಪತ್ತು. ನಾವು ಬಿಟ್ಟ ಸ್ಥಳದಲ್ಲಿಯೇ ವಿಪತ್ತು. ಈಗ ನಾವಿತ್ತ ಬಂದೆವು; ಅದೇ ಲೋಕಕ್ಕೊಂದು ವಿಪತ್ತು.

ರೂಪಾಯಿ- ಸತ್ಯ. ಮತ್ತೆ ಹೇಗೆ ನೀವು ಬಂದಿರಲ್ಲಾ? ಕೆಲಕಾಲದ ಹಿಂದೆ ನೀವಿಲ್ಲಿಂದ ಹೊರಟಾಗ, ಮಕ್ಕಳು ಮೊಮ್ಮಕ್ಕಳೊಡನೆ ಒಂದಲ್ಲೊಂದು ದಿನ ತವರು ಮನೆ ಸೇರಲಿರುವಿರಿ ಎಂಬುದು ನನಗೆ ಗೊತ್ತೇ ಇತ್ತು. ಆದರೆ ಈ ರೀತಿ ಅಕಾಲ ವೈಧವ್ಯ ಪ್ರಾಪ್ತವಾಗುವದೆಂದು ನಾನು ನೆನಸಿರಲಿಲ್ಲ. ಇದು ನೀವು ಹಿಂದಿರುಗುವ ಸಮಯವಲ್ಲವಲ್ಲಾ. ನಿಮಗೂ ಮೊದಲೇ ಇಲ್ಲಿ ಇದ್ದವರಿಗೂ ಈ ಅಕಾಲ ಆಗಮನದಿಂದ ಮೈಯ್ಯುರಿ ಹೊರತು ಸುಖವಿಲ್ಲವಲ್ಲಾ!

ನಾಣ್ಯಗಳು- ಅಪ್ಪಾ! ನಾವು ಸುಖ ಹುಡುಕಿ ಕೊಂಡಾದರೆ ಈ ಕೂಪಕ್ಕೆ ಬಂದು ಬೀಳುತ್ತೇವೆಯೆ? ನಾನು ಹೋದಲ್ಲಿ ಅಗತ್ಯವಿದ್ದಷ್ಟು ಸಾಮೂಹಿಕ ಸುಖವನ್ನು, ಸಂಘ ಸೌಖ್ಯವನ್ನು ಅನುಭವಿಸಿದ್ದೆವು; ಹಾಗೆಯೇ ಚಲನಾ ಸ್ವಾತಂತ್ರ್ಯವನ್ನು ಪಡೆದಿದ್ದೆವು. ಕಾರ್ಖಾನೆಗಳನ್ನೂ, ಆ ಮೂಲಕ ಕೆಲಸಗಾರರ ಕಿಸೆಯನ್ನೂ, ಅಲ್ಲಿಂದ ಅಂಗಡಿ ಭಂಡಸಾಲೆಗಳನ್ನೂ ಹೊಕ್ಕು ಹೊರಟವರು ನಾವು; ನಾವು ಹೊಕ್ಕಂತೆ ಹಲವು ಸಾಮಗ್ರಿಗಳನ್ನು ಅಲ್ಲಿಂದ ಹೊರಡಿಸಿದೆವು; ಹೀಗೆ ಹೋದಲ್ಲೆಲ್ಲಾ ಕಣ್ಣಾಮುಚ್ಚಾಲೆಯಾಟವಾಡುವ ಮಾನವರ ಪ್ರೀತಿಯ ಮಕ್ಕಳಾಗಿದ್ದೆವು. ಯಾವ ತಪ್ಪಿಗೋ ನಮಗಿಲ್ಲಿಯ

ಬಂಧನ ಪ್ರಾಪ್ತವಾಯಿತು. ನಮ್ಮಂತೆ ಬೇರೆ ಕಡೆಗಳವರೂ ಆಟ ಮುಗಿಸಿಕೊಂಡು ಇಲ್ಲಿಗೇ ಬರಲಿದ್ದಾರೆ.

ರೂಪಾಯಿ- ಇರಲಿ. ತಪ್ಪುಮಾಡದವರಿಗೆ ಶಿಕ್ಷೆಯೇಕೆ? ನೀವು ಆಟವಾಡುವ ಬದಲು ಏನಾದರೊಂದು ಮಾಟಮಾಡುವ ಹವ್ಯಾಸಕ್ಕೆಳೆದಿಲ್ಲವಷ್ಟೆ. ನೋಡಿ-ಇಲ್ಲಿರುವವರೆಲ್ಲಾ ಬೇರೆಬೇರೆ ಜಾತಿಯ ನಿಮ್ಮ ಸಹವ್ಯವಸಾಯಿಗಳೇ. ಅವರಿಂದಿರಲ್ಲಿ ಮುಚ್ಚುಮರೆ ಬೇಡ- ತಪ್ಪೇನಾದರೂ ಇದ್ದರೆ ಹೇಳಲಾಗದೇ?

ನಾಣ್ಯಗಳು- ಹೇಳಲಕ್ಕೇನುಂಟಣ್ಣಾ? ನಾವು ಮಾನವರ ಕೈಯಲ್ಲಿ ಆಟವಾಡಿಸಿಕೊಳ್ಳುವವರಷ್ಟೆ; ಆದರೆ ಇತ್ತೀಚಿಗೆ ನಮ್ಮ ಆಟದ ಹೊತ್ತಿನಲ್ಲೆಲ್ಲಾ ಒಂದು ಸುದೀರ್ಘ ಕಿಂಗ್ ಕೋಂಗ್ ಹಸ್ತದ ನೆರಳು ನಮ್ಮ ಮೇಲೆ ಬೀಳುತ್ತಿದ್ದಂತೆ ತೋರಿತು. ಇನ್ನೇನು, ಛಾಯೆಯನ್ನನುಸರಿಸಿ ನಿಜ ಹಸ್ತವೇ ಮುಂದಾಗಲಿದೆ ಎನ್ನುವಷ್ಟರಲ್ಲಿ ನಮ್ಮ ಆಟವನ್ನು ಮಧ್ಯದಲ್ಲಿಯೇ ನಿಲ್ಲಿಸಿ ಈ ರೀತಿ ಮೂಲ ಸ್ಥಳಕ್ಕೇನೆ ಕಳುಹಿ ಕೊಟ್ಟರು. ಆ ಭೀಕರ ಹಸ್ತವು ನಮ್ಮಾಟವಾಡಿಸಲು ಬರುವದಲ್ಲವಂತೆ- ನಮ್ಮೂಟ ಮಾಡಲು ಮುಂದಾಗಿದೆಯಂತೆ!

ರೂಪಾಯಿ— ಠಣ್ ಠಣ್! ಹಾಗೋ! ನಿಮ್ಮನ್ನು ಕರತಂದ ಈ ಮನುಷ್ಯ ಹೀರಾ ಮಂಳನೇ ಸರಿ. ಅವನ ನಿರೀಕ್ಷೆ ನಿಜವಾದರೂ ಕೂಡ ಇವನ ಕೈಯಾಟ ತಪ್ಪಿ ನಾವು ಇನ್ನೊಂದು ಹಸ್ತದೊಳಗಾಗುವೆವು ಹೊರತು ನಮ್ಮನ್ನು ಮುಕ್ಕುವ ಲೋಹವದನ ನಾವುದಿದೆ? ತಮ್ಮಗಳಿರಾ! ನೀವು ದುರವಸ್ಥೆಗೊಳಗಾದಿರಿ.ನಮ್ಮ ಸ್ಥಿತಿಗಳೆರಡು. ಸುಳಿಯುವುದು ಮತ್ತು ಸುಮ್ಮಗಿರುವುದು. ಇತ್ತಿಗಳ ಪೈಕಿ ನರಕಪ್ರಾಯವಾದ ಸುಮ್ಮಗಿರುವ ಬಂಧನಕ್ಕೆ ನೀವೂ ಒಳಗಾದಿರಿ. ಆದರೆ......ಇದ್ದವರೆ ಮತ್ತು ಬಂದವರೇ! ಎಲ್ಲರೂ ಕೇಳಿ: ನಾವೀಗ ಬಹುಸಂಖ್ಯೆಯಲ್ಲಿ ಈ ಬಂಧನದಲ್ಲಿ ಒಟ್ಟಾಗಿದ್ದೇವೆ; ನಮ್ಮಿಂದಾಗಲಿಕ್ಕಿದ್ದ ಎಷ್ಟೋ ಕಾರ್ಯಗಳು ಹೊರಗಡೆಯಲ್ಲಿ ಬಂದಾಗಿವೆ! ಹೀಗೆ ಸರ್ವತ್ರ ಸ್ತಬ್ಧತೆ ಹಬ್ಬಿದೆ. ಕೈಯಿಂದ ಕೈಗೆ ಹಾರುವ ನಮ್ಮ ಮೈಸ್ಫೂರ್ತಿಗೆ ಭಂಗ ಬಂದು ನಾವಿಲ್ಲಿ ಕೊರಗುತ್ತೇವಾದರೆ–ನಮ್ಮನ್ನಾಡಿಸಿ ಕುಣಿಯುವ ಮಾನವರ ಅಂತರ್ಲಾಗಗಳು ಅಲ್ಲಿ ನಿಂತಿವೆ! ಅರ್ಥಾತ್ ಅವರು ನಮ್ಮನ್ನು, ನಾವು ಅವರನ್ನು ಕರೆಯುತ್ತಿದ್ದೇವೆ– ಸೀತಾರಾಮರಂತೆ! ಸೀತೆಯನ್ನು ಹುಡುಕಿಕೊಂಡು ರಾಮ ಬಂದಿದ್ದ- ಅವಳಿಲ್ಲದೆ ದಿನಹೋಗದ ದೆಸೆಯಿಂದ. ಅಂತೆಯೇ ನಮ್ಮನ್ನು ಹುಡುಕಿಕೊಂಡು ನಮ್ಮ ಸಂಬಂಧಿಕರು ಬರುವ ಮುಹೂರ್ತ ಬಂದಿದೆ. ಭೇಷ್! ಎಲ್ಲೆಲ್ಲಿದ್ದ, ಎಷ್ಟೋ ವಾಯಿದೆಯಿದ್ದ, ನಿಮ್ಮನ್ನೆಲ್ಲಾ ಅಕಾಲದಲ್ಲಿ ಜಮೆ ಹಾಕಿ ಈ ಮಂಕ ಹೊರಗಿದ್ದವರಿಗೆ ಆಮಂತ್ರಣ ಕೊಟ್ಟಂತಾಯಿತು. ಶಹಭಾಸ್, ಠಣ್ (ಅಷ್ಟರಲ್ಲಿ ಪುನಃ ಚೀಲವು ಮೊದಲಿದ್ದಂತೆ ಇರಿಸಲ್ಪಡುವಾಗ 'ಗಿಝೀಲ್' ಸದ್ದಾಗುವದು. ಇದರರ್ಥ 'ಚಲಾವಣಾ ಸ್ವಾತಂತ್ರ್ಯಕೀ ಜೈ' ಎಂದು ನಾಣ್ಯಗಳ ಏಕ ಕಂಠದ ಜೈಕಾರ)

—೩—

ಮಧ್ಯರಾತ್ರಿ.

(ಠಣಕ್ ಘಣಕ್ ಎಂದು ಪೆಟ್ಟಿಗೆಯ ಕದ ಮುರಿಯಲ್ಪಡುವ ಸದ್ದಾಗುವದು. ಆಗ ಆ ರಭಸಕ್ಕೆ ಒಳಗಿನ ನಾಣ್ಯಗಳ 'ಮಕನಕ!' ಶಬ್ದವಾಗುವದು. ಅವುಗಳ ಮಾತುಕತೆಯೇನು?)

ಆಣೆ- ತಮ್ಮಗಳಿರಾ, ಅಣ್ಣಗಳಿರಾ, ದೇನು ಹೊಸ ರೀತಿಯ ಶಬ್ದ? ನಮ್ಮ ನಿತ್ಯದ ಒಡೆಯ ಎಂದೂ ಇಷ್ಟು ಗದ್ದಲ ಮಾಡಿದವನಲ್ಲಾ.

ಪಾವಣೆ- ಏನೋ ವಿಶೇಷ ತರವಾಗಿ ಕಾಣುತ್ತಿದೆ. ಆದರೆ ಯಾವ ವಿಶೇಷವಾದರೂ ನಮ್ಮ ವರ್ಗದವರಿಲ್ಲದೆ ನಡೆಯುವದಿಲ್ಲವಲ್ಲಾ. ಹೊರಗೆ ಹೋದರೆ

ಏನೆಲ್ಲಾ ಕಾರ್ಯ ಮಾಡಿಸಲಿಕ್ಕಾಗುತ್ತದೆ, ನೋಡಿದೆಯಾ! ಹೊರಗಿದ್ದ ನಮ್ಮವರ ಕಾರ್ಬಾರಿದು.

ದೋನಾಣೆ- ಈಗ ಇಂತಹ ಕಾರ್ಬಾರು ನಡಿಸುವಷ್ಟು ಅಧಿಕ ಸಂಖ್ಯೆಯಲ್ಲಿ ನಮ್ಮವರು ಹೊರಗೆ ಉಳಿದಿಲ್ಲ. ಎಲ್ಲರೂ ಇಲ್ಲಿಯಂತೆಯೇ ಒಂದೊಂದು ಸ್ಥಾನದಲ್ಲಿ ರಾಶಿಬಿದ್ದು ಬಂಧಿಸಲ್ಪಟ್ಟಿದ್ದಾರೆ. ನಾವು ಇಲ್ಲದೆ ಹೋದರೆ- ನಮ್ಮ ಅಗಲಿಕೆಯ ಆಪತ್ತಿನಿಂದಾಗಿ- ಎಷ್ಟೋ ಹೃದಯುಗಳು ಒಡೆದುಹೋಗಿವೆಯಂತೆ. ಅಂತಹ ಸ್ಫೋಟವಿದಾಗಿರಬಹುದೆ?

ನಾಲ್ಕಾಣೆ- ನಮ್ಮ ಅಭಾವದ ದೆಸೆಯಿಂದ ಹೃದಯ ತನ್ನಂತೆ ಒಡೆಯುವದೂ ಇದೆ; ಅನ್ಯರಿಗೆ ಹೋಗಿ ಬಡಿದು ಅಲ್ಲಿ ಒಡೆದು ಹಾಕುವದೂ ಇದೆ. ಇಂತಹ ಅವಘಡಗಳು ನಾವಿದ್ದ ದೆಸೆಯಿಂದಲೂ ಇಲ್ಲದ ದೆಸೆಯಿಂದಲೂ ನಡೆಯುತ್ತವೆಂದ ಮೇಲೆ- ನಮ್ಮ ಅಭಾವದ ದೆಸೆಯಿಂದಲೇ ಈ ಗೊಂದಲವೆನ್ನಬಹುದಲ್ಲ. ರೂಪಾಯಣ್ಣಾ! ಹೇಗೆ ಅಲ್ಲವೆ? (ಅದಗ ವ್ಯೆಗೆ ತಾಗುವರು)

ರೂಪಾಯಿ:- ನನ್ನ ಪ್ರೀತಿಯ ತಮ್ಮಗಳಿರಾ! ನಮ್ಮ ಸುಮುಹೂರ್ತ ಒದಗಿ ಬಂತು! ಅಗೋ- ಕೇಳಿರಿ. ಇದು ಹೃದಯ ಒಡೆಯುವ ಶಬ್ದವಲ್ಲ. ನಮ್ಮ ಅಭಾವದಿಂದಾಗಿ ವಾತಾವರಣವು ಮಂಜುಗಟ್ಟಿ, ಅದರಿಂದ ಮರಗಟ್ಟಿ ಶಿಲೆಯಂತಾದ ಹೃದಯುಗಳು ಒಟ್ಟುಗೂಡಿ ನಮ್ಮ ನೆಲೆಗೆ ಬಂದು ಢಿಕ್ಕಿ ಹೊಡೆಯುವ ಸದ್ದಿದು! ಆಲಿಸಿರಿ! ಸಂತೋಷದಿಂದ ಕೇಳಿರಿ. ಅದರ ಅನುಭವ ನನಗಿದೆ. ಇಂದಿನ ನಮ್ಮ ಬಂಧನಕಾರನ ಮುತ್ತಜ್ಜ ಒಂದೆಡೆಯಲ್ಲಿದ್ದ ನನ್ನನ್ನು ಹೊರಗೆಳೆವ ಮೊದಲು ಇದೇ ಶಬ್ದವೆಬ್ಬಿಸಿದ್ದ- ಪೆಟ್ಟಿಗೆಗೆ ಹೊಸ ಬಾಗಿಲು ಮಾಡಿ ನನ್ನನ್ನು ಹೊರಗೆ ತಂದಿದ್ದ. ಈಗ ಎರಡನೇ ಬಾರಿ ಅದೇ ಸದ್ದನ್ನು ಕೇಳುತ್ತಿದ್ದೇನೆ. ಅಂದು ಬಂದು ಸೇರಿದ್ದ ನನಗೆ ಇಂದೇ ಬಿಡುಗಡೆ. ನಿಮ್ಮೆಲ್ಲರ ಆಶೆಯಿಂದು ಫಲಿಸಲಿದೆ; ಚಲನಾ ಸ್ವಾತಂತ್ರ್ಯದೊರೆಯಲಿದೆ. ಕೇಳಿ, ಕೇಳಿ - ಹೋ - ನಮ್ಮ ಬಂಧನದ ಹೊರವೈ ಬಿರಿಯಿತು. ಒಬ್ಬನಿಂದ ಮುಚ್ಚಲ್ಪಟ್ಟು ಹೊದಿಕೆ ಹತ್ತು ಜನರಿಂದ ಬಿಚ್ಚಲ್ಪಟ್ಟಿತ್ತು. ಶಹಭಾಸ್. ಠಣ್! ಚಕ ಚಕ. ಗಿಝೀಲ್!

(ಎಂಟು ಹತ್ತು ಕೈಗಳು ಚೀಲವೆತ್ತುವವು; ಎರಡು ಬಾರಿ 'ಗಿಝೀಲ್' 'ಗಿಝೀಲ್' ಸದ್ದಾಗುವದು. ಅದರರ್ಥ 'ಮಹಾಜನ ಕೀ ಜೈ' ,'ಚಲನಾ ಸ್ವಾತಂತ್ರ್ಯ ಕೀ ಜೈ'! ನಾಣ್ಯಗಳು'!! ನಾಣ್ಯಗಳು ಹತ್ತು ಕೈಗಳಿಗೆ ಹಂಚಲ್ಪಡುವವು; ಹಂಚುವಾಗ 'ಕಚಕಚ' ಠಣಠಣ್' ಸದ್ದಾಗುವದು. ಅರ್ಥಾತ್ ಒಂದಕ್ಕೊಂದು ನಮಸ್ಕಾರ ಹೇಳುತ್ತಾ ಮುಂದೆ ವ್ಯವಹಾರ ಕ್ಷೇತ್ರದಲ್ಲಿ ಸುಖವಾಗಿ ಸಂಧಿಸೋಣ ಎನ್ನುತ್ತಾ ನಾಣ್ಯಗಳು ಒಂದನ್ನೊಂದು ಬೀಳ್ಕೊಳ್ಳುವವು.)

---

ನಿಮಗೆ ಬೇಸರವಾದಾಗ ನನಗೆ ಬರಿರಿ.

(೬ನೇ ಪುಟದಿಂದ ಮುಂದರಿಸಿದ್ದು)

**ವೈವಾಹಿಕ ಶಿಕ್ಷಣ!**

"ತರುಣಿಯರಿಗೆ ಸತೀತ್ವದಲ್ಲಿ ಶಿಕ್ಷಣವನ್ನು ಕೊಡಬೇಕೆಂದು ನಮ್ಮ ಸಂಸ್ಥಾನದವರಾದ ಸರ್ ಯಂ. ವಿಶ್ವೇಶ್ವರಯ್ಯನವರು ಮುಂಬ್ಯಾಯಲ್ಲಿ ಅಪ್ಪಣೆ ಕೊಡಿಸಿದ್ದಾರೆ. ಸ್ತ್ರೀಯರಿಗೆ ಮಾತ್ರ ಶಿಕ್ಷಣವಿತ್ತರೆ ಸಾಕೆ? ಅಂತಹ ಶಿಕ್ಷಣವು ತರುಣರಿಗೂ ದೊರಕ ಬೇಡವೇ? ಹಾಗೆ ಕೊಡುವಂತಹ ಶಿಕ್ಷಣವು ಕೇವಲ ಪುಸ್ತಕೀಯವಾಗಿರದೆ ಪ್ರಯೋಜನಕಾರಿಯಾಗಬೇಕಾದರೆ ಅದಕ್ಕೇನುಮಾಡಬೇಕು?" ಪ್ರಶ್ನಿಸುತ್ತಾರೆ.

ಶ್ರೀ.ಎಂ.ಆರ್.ಯಸ್. (ಬೆಂಗಳೂರು)

'ಸತೀತ್ವ' ಮತ್ತು 'ಪತೀತ್ವದಲ್ಲಿ' ಶಿಕ್ಷಣವೀಯುವುದಕ್ಕಾಗಿ ಒಂದು ಸಹ ವಿದ್ಯಾಭ್ಯಾಸವೀಯುವ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದರಾಯಿತು. ಆ ಕಾಲೇಜಿನಲ್ಲಿ ಕಲಿತ ತರುಣತರುಣಿಯರೇ ವಿವಾಹವಾಗಲು ಅರ್ಹರೆಂಬ ಕಾಯಿದೆ ಮಾಡಿದರೆ ಕೆಲಸ ಸುಲಭವಾಗಬಹುದಲ್ಲ! ಹೀಗಾದರೆ ಕಾಲೇಜಿನಿಂದ ಹೊರ ಬರುವಾಗಲೆ ಮದುವೆಯ ಸನ್ನಾಹವೂ ಆಗುವ ಸಂಭವವಿದೆ. ಕಾರ್ಯರೂಪೀ ಶಿಕ್ಷಣ ದೊರೆಯಬೇಕಾದರೆ ಇದೊಂದೇ ದಾರಿ!

೦೦೦

**ಅಜ್ಜಯ್ಯನ ಸಮಸ್ಯೆ**

"ನಮ್ಮ ಮನೆಯ ಸಮೀಪ ಒಬ್ಬ ಅಜ್ಜಯ್ಯಗಿದ್ದಾರೆ. ಬೆಳಕನ್ನು ಕಾಣದ ಬೊಕ್ಕಸವೊಂದು ಅವರಲ್ಲಿದೆಯೆಂದು ನನ್ನ ಭಾವನೆ. ಫ್ರಾನ್ಸಿನ ಪತನವಾದಂದಿನಿಂದ ಅವರ ಅವಸ್ಥೆ ಕಠಿನವಾಗುತ್ತಾ ಬರುತ್ತಿದೆ. ಹಿಟ್ಲರ್ ಹಾಳಾಗಲೆಂದು ಪ್ರತಿದಿನ ಪ್ರಾರ್ಥಿಸಿದರೂ ಅಜ್ಜಯ್ಯ ಒಂದು ಚಿಕ್ಕಾಸಾದರೂ ಯುದ್ಧ ನಿಧಿಗೆ ಕೊಡಲೊಪ್ಪುವುದಿಲ್ಲ. "ಹಿಟ್ಲರ್ ಸತ್ತನೊ?" ಎಂದು ಕೇಳುವುದೇ ಅವರ ಇತ್ತೀಚಿಗಿನ ಅಭ್ಯಾಸವಾಗಿದೆ. ಇವರಿಗೆ ನಾನೇನು ಮಾಡಬೇಕು?" ಪ್ರಶ್ನಿಸುತ್ತಾರೆ ಶ್ರೀ. ಯಂ. ಆರ್. ಪಿ. (ಮಂಗಳೂರು).

ಅವರನ್ನು ಜಿಲ್ಲಾ ಕಲೆಕ್ಟರರಲ್ಲಿಗೆ ಕಳುಹಿಸಿರಿ!

೦೦೦

**ಸೈನಿಕ ಮನೋವೃತ್ತಿ**

"ಮಾರ್ಶಲ್ ಪಿಟೈನ್‌ರವರು ಹಿಟ್ಲರರಿಗೆ ಶರಣಾಗತರಾಗಲು ಕಾರಣವೇನು? ಸೈನಿಕರಲ್ಲಿ ಹೋರಾಡುವ ಅಭಿಲಾಷೆಯೇ ಹೆಚ್ಚಲ್ಲವೆ?" ಕೇಳುತ್ತಾರೆ ಶ್ರೀ. ವಿ. ಯನ್. ಪಿ. (ಅಂಕೊಲ).

ಸೈನಿಕರು ಜಯಾಪಜಯವನ್ನು ನೋಡುವುದಲ್ಲದೆ ದೂರದೃಷ್ಟಿಯನ್ನು ಪಯೋಗಿಸುವುದಿಲ್ಲ. ನಿಜವಾಗಿಯೂ ಸೈನಿಕರಿಗೆ ಯುದ್ಧ ಮಾಡಿ ರಕ್ತದ ಹೊಳೆ ಹರಿಸಲು ಮನಸ್ಸಿಲ್ಲ. ಫ್ರೆಂಚ್ ಪ್ರಧಾನ ರೇನೋರವರು ಸಾಹಸಮನೋವೃತ್ತಿಯವರೆಂದು ಭಾವಿಸಿ ಸೈನಿಕ ಮುತ್ಸದ್ದಿ ಪಿಟೆನ್‌ರವರು ಹಿಟ್ಲರನೊಡನೆ ಸಂಧಿ ಮಾಡಲು ಒಪ್ಪಿಕೊಂಡಿರಬೇಕು.

**ನೂತನೋಪಾಯ**

"ಮಂಗಳೂರಿನಲ್ಲಿ ಭೀಕರ ರೂಪದ ಭಿಕ್ಷುಕರು ದಾರಿಯುದ್ದಕ್ಕೂ ನರಳಿಕೊಂಡು ಹಣ ಬೇಡುತ್ತಿರುವ ದೃಶ್ಯಗಳು ಹೆಚ್ಚುತ್ತಿವೆ. ಯುದ್ಧರಂಗದಲ್ಲಿ ಸೈನಿಕರ ಪಾಡು ಅದಕ್ಕಿಂತಲೂ ಕಠಿಣವೆಂಬುದನ್ನು ಮನದಟ್ಟುಮಾಡಲಿಕ್ಕಾಗಿ ಅಧಿಕಾರಿಗಳು ಅಂತಹ ದೃಶ್ಯಗಳು ಕಡಿಮೆಯಾಗದಂತೆ ಯತ್ನಿಸುತ್ತಿರಬಹುದೆ?" ಪ್ರಶ್ನಿಸುತ್ತಾರೆ. ಶ್ರೀ. ಜಿ. ಯಚ್. (ಮಂಗಳೂರು).

ಖರ್ಚಿಲ್ಲದೆ ಮಾಡುವ ಯುದ್ಧ ಪ್ರಚಾರವಲ್ಲವೆ? ಅದೂ ಒಂದು ನೂತನ ವಿಧಾನ. ನಮ್ಮಲ್ಲಿ ಅದ್ಭುತ ಜ್ಞಾನಿಗಳಿಲ್ಲವೆಂದವರಾರು?

೦೦೦

**ಹಿಟ್ಲರ್ ಬುದ್ಧರು**

ಯುದ್ಧ ಕಾಲದಲ್ಲಿ ಹುಟ್ಟಿದ ಮಕ್ಕಳು ಹಿಟ್ಲರನಂತಾಗುತ್ತಾದೆಂಬುದು ನಿಜವೇ?. ಪ್ರಶ್ನಿಸುತ್ತಾರೆ ಶ್ರೀ. ಕೆ. ವಿ. ಯು. (ಕೋಲಾರ).

ಶಾಂತಿಕಾಲದಲ್ಲಿ ಹುಟ್ಟುವ ಮಕ್ಕಳು ಬುದ್ಧರಂತಾಗುವುದಿದ್ದರೆ ನೀವು ಕೇಳಿರುವ ಪ್ರಶ್ನೆಯೂ ನಿಜ.

---

ಪುಸ್ತಕ ವಿಮರ್ಶೆಯು
ಮುಂದಿನ ವಾರ ಪ್ರಕಟಿಸಲಾಗುವುದು

---



"ನಿಮ್ಮಂಥ ಎ[illegible] ಯುವಕರಿಗೆ ಈ ಕಾರ್ಯವು ತಕ್ಕುದಲ್ಲ"

ವೇಶ್ಯಾಗೃಹವನ್ನು ಶೋಧಿಸುತ್ತಿದ್ದಾಗ ನನಗೆ ಪರಿಚಿತಳಾದ ಓರ್ವ ಬಂಗಾಲೀ ತರುಣಿಯ ನೆನಪು ನನ್ನ ಹೃದಯದಲ್ಲಿ ಅಚ್ಚಳಿಯದೆ ಉಳಿದಿದೆ. ನನ್ನ ಮನಸ್ಸಿನಲ್ಲೊಂದು ಪರಿಣಾಮವನ್ನುಂಟು ಮಾಡಿದ ಅವಳನ್ನೂ ಅವಳ ಆತ್ಮಕಥೆಯನ್ನೂ ಜೀವಮಾನದಲ್ಲೇ ಮರೆಯಲು ಸಾಧ್ಯವಾಗಲಿಕ್ಕಿಲ್ಲ. ಅವಳ ಕಥೆಯನ್ನು ಕೇಳಿ, ನಾನು ಶೋಧಿಸುತ್ತಿದ್ದುದು ವೇಶ್ಯಾ ಗೃಹವನ್ನಲ್ಲ; ಹಿಂದೂ ಸಮಾಜದ ಅತ್ಯಾಚಾರ, ಅನಾಚಾರವನ್ನೆಂದು ಭಾವಿಸಿಕೊಂಡೆನು.

ಹಿಂದುಸ್ತಾನದಲ್ಲಿರುವ ವೇಶ್ಯೆಯರಲ್ಲಿ ಮುಕ್ಕಾಲು ಪಾಲಿಗಿಂತ ಹೆಚ್ಚಾಗಿ ಹಿಂದೂ ಸ್ತ್ರೀಯರೇ ವೇಶ್ಯೆಯರಾಗಿರುವುದಕ್ಕೆ ಹಿಂದೂ ಸಮಾಜದ ನೀತಿಯೇ ಕಾರಣವೆಂದು ಮನಗಂಡೆನು. ಬಹುಸಂಖ್ಯಾತರಾದ ಹಿಂದೂ ಜನರಲ್ಲಿ ಬಹುಸಂಖ್ಯಾತರಾದ ವೇಶ್ಯೆಯರಿರುವುದು ಸ್ವಾಭಾವಿಕವೆಂದು ಹೇಳುವ ಕೆಲವರ ವಾದದಲ್ಲಿ ಅರ್ಥವಿಲ್ಲ. ಹಿಂದೂ ಧರ್ಮದ ಅಂಥ ನೀತಿಯು; ಅದರ ಅವನತಿಗೆ ಎಷ್ಟು ಸಹಾಯ ಮಾಡುತ್ತಿದೆಯೆಂಬುದನ್ನು

ನಾನು ಆ ತರುಣಿಯ ದುರಂತ ಕಥೆಯಿಂದ ಮನಗಂಡೆನು.

"ಖೇತ್‌ವಾಡಿ ೧ಳನೇ ಗಲ್ಲಿ"ಯಲ್ಲಿ ಒಂದೇಒಂದಾದ ಮನೆಯು ನನ್ನ ಗಮನವನ್ನೆಳೆಯಿತು. ಬಾಗಿಲಿನಲ್ಲಿ ಪಹರೆಯವನು ದೊಣ್ಣೆ ಹಿಡಿದು ಕುಳಿತ್ತಿದ್ದನು. ಆ ಚಿಕ್ಕ ರಸ್ತೆಯಲ್ಲಿ ಅಷ್ಟಾಗಿ ಜನ ಸಂದಣಿಯಿರಲಿಲ್ಲ. ಬಂದು ಹೋಗುತ್ತಿದ್ದ ನಾಲ್ಕಾರು ಸಭ್ಯ ಗೃಹಸ್ಥರು ಅದೇ ಮನೆಯನ್ನು ಹತ್ತಿ ಇಳಿಯುತ್ತಿದ್ದರು. ನಾನೂ ಆ ಮನೆಯ ಮೆಟ್ಟಲನ್ನೇರಿದೆನು.

ಆ ಮನೆಯ ನಾಲ್ಕು ಮಹಡಿಗಳಲ್ಲೂ ವೇಶ್ಯಾಸ್ತ್ರೀಯರೇ ತುಂಬಿದ್ದರು. ಒಂದೊಂದು ಕೋಣೆಯಲ್ಲಿ ಇಬ್ಬರಿಂದ ಹಿಡಿದು ನಾಲ್ಕು ಐದುಜನರವರೆಗೂ ವಾಸಮಾಡುತ್ತಿದ್ದರು. ನೋಡಿದರೆಸಂಸಾರಿಗಳಂತೆ ಕಾಣುವ ಅವರನ್ನು ವೇಶ್ಯಾಸ್ತ್ರೀಯರೆಂದು ಹೇಳಲು ನನಗೆ ಧೈರ್ಯವು ಬರಲಿಲ್ಲ. ನಾನು ನಾಲ್ಕು ಮಹಡಿಯನ್ನು ಸುತ್ತಾಡುತ್ತಾ ಕೆಳಗಿಳಿದರೂ ನನ್ನನ್ನು ಯಾರೂ ಕರೆಯಲಿಲ್ಲ ನನ್ನ ಮುಖವನ್ನು ದಿಟ್ಟಿಸಿ ನೋಡುತ್ತಿದ್ದರು. ಎರಡನೇ ಮಹಡಿಯ ಕೋಣೆಯಲ್ಲಿ ಒಬ್ಬಾತನು ಕುಳಿತು ವೇಶ್ಯೆಯೊಡನೆ ಸಂಭಾಷಣೆಗೆ ಮೊದಲು ಮಾಡಿದ್ದನು. ನಾನು ಆ ಗೃಹವನ್ನೆಲ್ಲಾ ಸುತ್ತಾಡಿ ಕೆಳಗಿಳಿದರೂ ಅವನು ಮಾತನಾಡುತ್ತಲೇ ಇದ್ದನು. ಆ ಕೋಣೆಯ ಹೊರಗೆ ಕೂಲಿ ಮಾಡುವಮುದುಕಿಯೊಬ್ಬಳು ಕುಳಿತಿದ್ದಳು. ಅವನು ಹೋಗುವದಿಲ್ಲವೇ ಎಂದು ಆ ಮುದುಕಿಯನ್ನು ಕೇಳಿದೆನು. ಅವಳು ಪಿಸುಮಾತಿನಿಂಥ ಹೇಳಿದಳು. "ಅವನು ನಿತ್ಯ ಬರುವ ಗಿರಾಕಿ. ಇನ್ನು ಸ್ವಲ್ಪ ಹೊತ್ತಾದ ಮೇಲೆ ಹೋಗಬಹುದು. "ಗಂಡ ಹೆಂಡಿರಂತೆ ಮಾತನಾಡುತ್ತಾ ಕುಳಿತಿದ್ದ ಅವರನ್ನು ನೋಡಿ, ಅಲ್ಲಿದ್ದ ಹೆಚ್ಚು ಕಮ್ಮಿ ಎಲ್ಲಾ ವೇಶ್ಯೆಯರೂ ಸಭ್ಯ ಗೃಹಸ್ಥರಂತೆ, ವರ್ತಿಸುತ್ತಾ

ರಿಂಬುದನ್ನು ಮ[illegible]
ನಾನು ಅಡ್ಡಾಡ[illegible]
ಆ ವೇಶ್ಯೆಯ[illegible]
ಮಹಾರಾಷ್ಟ್ರ ಭಾ[illegible]
ಗೆ ಕೇಳಿಸುತ್ತಿತ್ತು.
ಯಲ್ಲಿ ಅಷ್ಟೊಂದು
ಇಲ್ಲದ ನನಗೆ
ಯಾವ ವಿಷಯವ
ಗ್ರಹಿಸಲಿಕ್ಕೆ ಸ
ಲಾರದೆಂದು ಭಾವಿ
ಯಿಂದ ಮನೆಯ
ಹೊರಟಿದ್ದೆನು.

ಆ ಮನೆಯ
ಅಂತಸ್ತಿನ ಕೋಣೆ
ಕಡೆಗೆ ನನ್ನ ಗ
ಆ ಗೃಹವನ್ನು
ಯಲ್ಲಿ ಸುಮಾರ
ವಯಸ್ಸಿನ ಮಾ
ನಾನು ಹಿಂತಿರು
ಲಿಲ್ಲ. ಅರ್ಥ ಶ
ಸ್ವರೂಪವು ಚೇ
ಮಿನುಗುತ್ತಿರುವ
ಮಣ್ಣಿನ ಮಡಿಕೆ
ಚಾಪೆಯ ಮೇ
ಇಷ್ಟಲ್ಲದೆ ಆ
ತಕ್ಕ ಮಟ್ಟಿಗೆ
ಕೋಣೆಯಿಂದ
ಯೂ, ಅಲ್ಲಿ
ತರುಣಿ ವೇಶ್ಯೆ
ಮಯವಾಗಿ
ಣಿಯು ಗಿರಾಕಿ

ಒಳಹೋಗೇ
ವಿಟಪುರುಷರ
ಆ ಕೋಣೆಯ
ಅವಳನ್ನು ಕಂಡ
[illegible]
ಗಳಿಂದಲೂ
[illegible]
ವೇಶ್ಯೆಯಾಗಿರು




ತು ನಾನು
ಆ ಕೋಣೆ
ಮೇಲ್ಪಟ್ಟ
ಕುಳಿತಿದ್ದನು.
ಕನು ಅಲ್ಲಿರ
, ಕೋಣೆಯ
ತ್ತು. ಒಂದು
ತು ಮೂರು
ಚಾಪೆ, ಆ
ರ್ವ ತರುಣಿ,
ನೂ ಇರಲಿಲ್ಲ.
ಲ್ಲದ್ದ ಇತರ
ದ್ದ ಆ ಕೋಣೆ
ಕುಳಿತಿದ್ದ ಆ
ದು ಸಮಸ್ಯಾ
ಆ ತರು
ರಲಿಲ್ಲ.
ಬಾರದಿದ್ದರೂ
ಸಿ, ನಾನೂ
ನೋಡಿದೆನು.
ವೇಗನೆ ಕುಳಿ
ಎರಡು ಕೈ
ದು ನಿಂತು
ದನು. ಅವಳು
ನಾನು

ಇಣಿಕಿ ನೋಡಿದ ನನ್ನ ಅಚಾತುರ್ಯಕ್ಕಾಗಿ ಪಶ್ಚಾತ್ತಾಪಪಟ್ಟು, "ಮಾಫ್ ಕರ್‌ನಾ, ಮುಜೆ ಮಾಲೂಂ ನಹಿ ಥಾ!" (ಕ್ಷಮಿಸ ಬೇಕು! ನನಗೆ ತಿಳಿದಿರಲಿಲ್ಲ!) ಅಂದೆನು. ಆ ತರುಣಿಗೆ ನನ್ನ ಸದ್ವರ್ತನೆಗಾಗಿ ಆಶ್ಚರ್ಯವಾಯಿತಲ್ಲದೆ, ನನ್ನ ಕೈಯಲ್ಲಿರುವ "ಸಂಧ್ಯಾ ಸಮಾಚಾರ" ಪತ್ರಿಕೆಯು ನನ್ನನ್ನು ವಿದ್ಯಾವಂತನೆಂದು ಪರಿಚಯ ಮಾಡಿ ಕೊಟ್ಟಿತು. ಅವಳು ಬಾಗಿಲು ಹಾಕುವದನ್ನು ಅಷ್ಟಕ್ಕೇ ನಿಲ್ಲಿಸಿ, "ನಿಮ್ಮಂಥ ಎಳೆ ಯುವಕರಿಗೆ ಈ ಕಾರ್ಯವು ತಕ್ಕುದಲ್ಲ!" ಎಂದಳು.

ಅವಳ ಆ ಮಾತನ್ನು ಕೇಳಿ ನನಗೆ ಬಹು ಆಶ್ಚರ್ಯವಾಯ್ತು. ಅವಳೋರ್ವ ಸಂಸಾರಿ, ಸತಿಯಾಗಿದ್ದಲ್ಲಿ, ಆ ವೇಶ್ಯಾವಸತಿಯಲ್ಲಿರುವದೇಕೆ? ಏನಾದರೂ ಆಗಲಿ ಅವಳಾರೆಂಬುದನ್ನು ತಿಳಿಯಲೇ ಬೇಕೆಂದು ಸಂಕಲ್ಪ ಮಾಡಿ, ಬಾಗಿಲು ಹಾಕುತ್ತಿದ್ದ ಅವಳನ್ನು ಕುರಿತು ಹೇಳಿದೆನು. "ನನಗೆ ಯಾವ ಕಾರ್ಯವು ತಕ್ಕುದಲ್ಲವೆಂದು ಹೇಳಿದಿರಿ? ನೀವು ನನ್ನ ವಿಷಯದಲ್ಲಿ ಅನ್ಯಥಾ ಭಾವಿಸಿದಂತೆ ಕಾಣುತ್ತದೆ! ನಾನೇನು ಅಂಥಾ ದುರಾಚಾರಿಯಲ್ಲ!" ಅಂದೆನು.

ಅವಳು ಒಂದು ಬಾಗಿಲನ್ನು ಪೂರಾ ಮುಚ್ಚಲು ಪ್ರಯತ್ನಿಸುತ್ತಾ ಹೇಳಿದಳು, "ಅಂಥವರಲ್ಲದಿದ್ದರೆ, ವೇಶ್ಯಾವಸತಿಗೇಕೆ ಬಂದಿರಿ?"

ಅನಾಯಾಸವಾಗಿ ಸಂಭಾಷಣೆಗೆ ಅನುಕೂಲ ವಾತಾವರಣವು ಕಲ್ಪಿತವಾಗುತ್ತಿರುವದನ್ನು ನೋಡಿ, ಆ ಸಂದರ್ಭವನ್ನು ಕಳೆದುಕೊಳ್ಳಲಾರದೆ, ಅವಳೊಡನೆ ಹೇಳಿದೆನು. "ಸ್ವಲ್ಪ ತಡೆಯಿರಿ! ಯಾತಕ್ಕೆ ಬಂದಿದ್ದೇನೆಂದು ನೀವು ತಿಳಿದುಕೊಂಡರೆ, ನನ್ನ ವಿಷಯದಲ್ಲಿ ನೀವು ಅನ್ಯಥಾ ಭಾವಿಸಲಾರಿರಿ!"

ಕೋಣೆಯ ಹೊರಗೆ ನಾನು, ಒಳಗೆ ಅವಳು, ಈ ರೀತಿಯಿಂದ ಸಂಭಾಷಣೆಗೆ ಮೊದಲಾಗಿದೆಯಷ್ಟೆ! ಆ ಸಂಭಾಷಣೆಯು ಮುಂದುವರಿಯಲು ದೇವರೇ ನನಗೊಂದು ಅನುಕೂಲವನ್ನು ಕಲ್ಪಿಸಿಕೊಟ್ಟನು. ನನ್ನನ್ನೆ ಹಿಂಬಾಲಿಸಿ ಬರುತ್ತಿದ್ದ ಹೋಟೆಲಿನ ಹುಡುಗನೊಬ್ಬನು "ಚಹ ತರಲೇ"ಎಂದು ಕೇಳಿದನು. ನಾನು, "ಎರಡು ಚಹ ತೆಗೆದುಕೊಂಡು ಬಾ"ಎಂದೆನು. ನನ್ನ ಧೈರ್ಯವನ್ನು ಮನಗಂಡ ಆ ತರುಣಿಯು ಬಾಗಿಲು ಹಾಕುವುದನ್ನು ನಿಲ್ಲಿಸಿ ನನ್ನ ಮುಖವನ್ನೊಮ್ಮೆ ನೋಡಿದಳು. ಅಡಗಿಸಿ ಇಟ್ಟುಕೊಂಡಿದ್ದ ಪ್ರಸನ್ನತೆಯು ಅವಳ ನೇತ್ರದಲ್ಲಿ ಪ್ರತಿಬಿಂಬಿಸಿತು. ಅವಳು ನನ್ನನ್ನು ಒಳಗೆ ಕರೆದುಕೊಂಡು ಹಾಸಿದ್ದ ಚಾಪೆಯ ಮೇಲೆ ಕೂರಿಸಿದಳು. ಬಾಗಿಲನ್ನು ಮಾತ್ರ ಪೂರಾ ತೆರೆದಿದ್ದಳು.

ಶೀಘ್ರದಲ್ಲಿಯೇ ಆ ಹುಡುಗನು ತಂದ ಚಹವನ್ನು ಕುಡಿಯುತ್ತಾ ನಾನು ಆ ತರುಣಿಯನ್ನು ನಿರೀಕ್ಷಿಸುತ್ತಿದ್ದೆನು. ಎಷ್ಟು ಸೌಮ್ಯಭಾವ, ಎಷ್ಟು ನಿಸರ್ಗ ಸೌಂದರ್ಯ, ಅದೆಷ್ಟು ಸದ್ವರ್ತನೆ? ಆದರೂ ಅವಳಿರುವದು ವೇಶ್ಯಾವಸತಿಯಲ್ಲಿ! ಯಾಕೆ? ಏನು? ಎಂಬ ನೂರಾರು ಪ್ರಶ್ನೆಗಳು ನನ್ನ ಹೃದಯಾಂತರಾಳದಲ್ಲಿ ಆಂದೋಲನವನ್ನೆಬ್ಬಿಸಿತ್ತು.

ನಿಂತುಹೋಗಿದ್ದ ಸಂಭಾಷಣೆಗೆ ಮೊದಲು ಮಾಡಿದೆನು."ನಿಮ್ಮ ಊರಾವದು?' 'ಬಂಗಾಲ' 'ಅಂದರೆ,- ಕಲ್ಕತ್ತವೆ?' 'ಹೌದು ಕಲ್ಕತ್ತ' ಸ್ವಲ್ಪ ಹೊತ್ತು ನೀರವ. ನಂತರ ಹೇಳಿದೆನು. 'ಕ್ಷಮಿಸಬೇಕು! ಏನೋ ನಿಮ್ಮೊಡನೆ ಅಷ್ಟು ಮಾತಾಡಬೇಕೆಂದು ಬಯಕೆಯಾಯ್ತು. ಆದ್ದರಿಂದಲೇ ನಾನು ಇಣಿಕಿ ನೋಡಿದ್ದು. ನನ್ನ ಹೃದಯದಲ್ಲಿ ಯಾವ ತರದ ದುರಭಿಪ್ರಾಯವೂ ಇರಲಿಲ್ಲ. ಈಗಲೂ ಇಲ್ಲ! ನೀವು ನನ್ನ ವಿಷಯವಾಗಿ ಅನ್ಯಥಾ ಭಾವಿಸಿದ್ದಿರಲ್ಲವೆ?' ಅಂದೆನು.

ಅವಳು ನಸುನಗುತ್ತಾ ಹೇಳಿದಳು. "ಹೌದು. ಇಲ್ಲಿಗೆ ಬರುವವರೆಲ್ಲಾ ಹಾಗೆಯೇ! ಯಾವ ದುರಭಿಪ್ರಾಯದಿಂದಲೂ ಇಲ್ಲಿಗೆ ಬರುವುದಿಲ್ಲ. ಬಂದ ಮೇಲೆ- - -!" ಅವಳು ಮಾತನ್ನು ಅರ್ಧದಲ್ಲಿಯೇ ನಿಲ್ಲಿಸಿದಳು. "ನೀವು ಹಾಗೆ ಭಾವಿಸುವದಾದರೆ ಅದು ನಿಮ್ಮ ತಪ್ಪಭಿಪ್ರಾಯ! ಇರಲಿ! ನಾನು ನಿಮ್ಮನ್ನು ಇತರ ಕೋಣೆಯಲ್ಲಿರುವ ಹೆಂಗಸರಂತೆ ಭಾವಿಸಿದರೆ ಅದು ನನ್ನ ತಪ್ಪು ಭಾವನೆಯಾಗುವದಿಲ್ಲವೇ? ಹಾಗೆಯೇ ನೀವು ಸಹ ಇಲ್ಲಿಗೆ ಬರುತ್ತಿರುವ ಇತರರಂತೆ ನನ್ನನ್ನೂ ಭಾವಿಸಿದರೆ, ಅದು ನಿಮ್ಮ ತಪ್ಪು ಭಾವನೆಯಾಗುತ್ತದೆ!" ಎಂದು ಧೈರ್ಯಮಾಡಿ ಕಣ್ಣುಮುಚ್ಚಿಕೊಂಡು ಹೇಳಿಬಿಟ್ಟೆನು. ಆ ನನ್ನ ಪ್ರಶ್ನೆಗೆ ಅವಳು ಏನಂದಳು ಗೊತ್ತೇ? "ಇತರ ಕೋಣೆಯಲ್ಲಿರುವ ಹೆಂಗಸರಿಗೂ ನನಗೂ ಯಾವ ತಾರತಮ್ಯವೂ ಇಲ್ಲ" ಎಂದು, ಒಂದು ದೊಡ್ಡ ನಿಟ್ಟುಸಿರನ್ನು ಬಿಟ್ಟಳು. ನಾನು ಅವಾಕ್ಕಾದೆ, "ನಂಬಲಾರೆ,-ನಿಮ್ಮಂಥವರು, - - -" ಎಂದು ಅರ್ಧಮಾತ್ರ ಹೇಳಿದ್ದೇನೆ ಅಷ್ಟೆ, ನಾನು ಹಾರ್ದಿಕವಾಗಿ ಬಯಸುತ್ತಿದ್ದ ಅವಳ ಆತ್ಮಕಥೆಯು ತಾನಾಗಿಯೇ ಹೊರಬೀಳಲನುವಾಯ್ತು:

ಹೌದು ಮಹಾಶಯ್! (ಬಂಗಾಳದವರು, "ಮಹಾಶಯ್" ಎಂದು ಹೇಳುವದು ಬಹಳ) ನಾನೀಗ ವೇಶ್ಯೆ! ಆದರೆ ಒಂದು ದಿವಸ ನಾನೂ ನಿಮ್ಮಂಥ ಗೌರವಸ್ಥ ಜನರಲ್ಲಿ ಒಬ್ಬಳಾಗಿದ್ದೆ! ಈಗ ನೀವು ಅಂದಂತೆ, ಇತರ ಕೋಣೆಯಲ್ಲಿರುವ ಹೆಂಗಸರಂತೆಯೇ ನಾನೂ ಒಬ್ಬ ವೇಶ್ಯೆ! ಆದರೆ ಯಾಕೆ ವೇಶ್ಯೆಯಾದೆ? ಅಂಥಾ ಗಂಡಾಂತರವಾದರೂ ಏನು ಒದಗಿತ್ತು? ಎಂದು ನೀವು ಕೇಳಬಹುದು. ಹೌದು ಒಂದು ದುರಂತ ಗಂಡಾಂತರ ಒದಗಿತ್ತು. ಆದರಿಂದ ಪಾರಾಗಲು ನನಗಿದ್ದುದು ಎರಡೇ ಎರಡು ದಾರಿ- - -" ಅವಳು ನಿಟ್ಟುಸುರು ಬಿಟ್ಟು ಸುಮ್ಮನಾದದ್ದನ್ನು ಕಂಡು "ಹಾಗಾದರೆ, ನೀವು ಆ ಎರಡು ದಾರಿಯಲ್ಲಿ ಪಾರಾಗಲು ಹವಣಿಸಲಿಲ್ಲವೇ?" ಎಂದು ಕೇಳಿದೆನು.

"ಮಹಾಶಯ್! ಆ ಎರಡು ದಾರಿಯೂ ಗಂಡಾಂತರದ ತೊಡಕಿನ ದಾರಿಯಾಗಿತ್ತು. ಒಂದನೇ ದಾರಿಯು "ಆತ್ಮಹತ್ಯೆ" ಎರಡನೆಯ ದಾರಿಯು "ಮಾನಹತ್ಯೆ" ನನ್ನ ಎದುರು ಉಳಿದಿದ್ದ ಈ ಎರಡು ಹತ್ಯಾ ಕಾಂಡಗಳಲ್ಲಿ ಆತ್ಮಹತ್ಯೆಯು ನನಗೆ ಭಯಂಕರವಾಗಿ ತೋರಿತು. ಅದಕ್ಕೆ ನನ್ನ ಆತ್ಮ ವೇ ಒಡಂಬಡುತ್ತಿರಲಿಲ್ಲ. ಉಳಿದದ್ದು ಮಾನಹತ್ಯೆ! ಮಾನಹತ್ಯಕ್ಕೂ ಆ ಆತ್ಮವು ಒಡಂಬಡಲಿಲ್ಲ. ಆದರೂ ಮೂರನೆಯ ದಾರಿಯೊಂದನ್ನು ಹೇಳಿಕೊಡುವಷ್ಟು ಶಕ್ತಿಯು ಆ ಆತ್ಮಕ್ಕೆ ಇರಲೂ ಇಲ್ಲ. ಕಡೆಗೆ ಮಾನ ಹತ್ಯವೇ ನನ್ನ ಪಾಲಿಗೆ ಸರಿಯೆಂದು "ನಾನು" ಮಾಡಿದ ತೀರ್ಮಾನ- - -"

"ಅಂಥಾ ಗಂಡಾಂತರವಾದರೂ ನಿಮಗೆ ಹೇಗೆ ಒದಗಿತ್ತು?"ಎಂದು, ಸುಮ್ಮನಾಗಿದ್ದ, ಆ ನಿರ್ಭಾಗ್ಯ ತರುಣಿಯನ್ನು ಕೇಳಿದೆನು. ಅಷ್ಟರೊಳಗಾಗಿ ನನ್ನಲ್ಲಿ ಸ್ವಲ್ಪ ಮಟ್ಟಿಗೆ ಆತ್ಮೀಯತೆಯನ್ನು ಬೆಳೆಸಿಕೊಂಡ ಆ ತರುಣಿಯು ತನ್ನ ನಿಜವೃತ್ತಾಂತವನ್ನು ಇದ್ದದ್ದು ಇದ್ದ ಹಾಗೆಯೇ ಹೇಳತೊಡಗಿದಳು.

"ಕೇಳಿ ಮಹಾಶಯ್! ಕೇಳಲೇಬೇಕೆಂದರೆ ಕೇಳಿ! ಹಾಗೆಯೂ ನಂಬಿ

ದರೆ ನಂಬಿ! ಆದರಿಂದ ನನಗೇನೂ ಆಗಬೇಕಾಗಿಲ್ಲ. ಏನೋ ಹೇಳುತ್ತಿದ್ದೇನೆ. ಆ ಭಂಗಾಳ ಪ್ರಾಂತ್ಯದ, ಕಲ್ಕತ್ತ ನಗರದ, ಎಡ್ವರ್ಡ ಸ್ಟ್ರೀಟ್‌ನಲ್ಲಿ ನಾನು ವಾಸಿಸುತ್ತಿದ್ದ ಮನೆಯು ಈಗಲೂ ಇರಬಹುದು! ಕ್ಲಯಿವ್ ರಸ್ತೆಯಲ್ಲಿ ನಾನು ಓದಿದ್ದ ಶಾಲೆಯು ಈಗಲೂ ಹಾಗೆಯೇ ಇರಬಹುದು! ಆದರೆ ಅಲ್ಲೇ ಇದ್ದ ನಾನು ಮಾತ್ರ ಇದ್ದ ಹಾಗೆಯೇ ಇಲ್ಲ. ಬದಲಾಗಿಹೋಗಿದ್ದೇನೆ. ಹಗಲು ಕತ್ತಲೆಯಾಗಿ ಬದಲಿಸಿದಂತೆ.

ವ್ಯಾಪಾರಸ್ಥನಾದ ನನ್ನ ತಂದೆಗೆ ಏನೂ ಕಡಿಮೆಯಿರಲಿಲ್ಲ. ಹೈಸ್ಕೂಲಿನ ವರೆಗೆ ನನ್ನನ್ನು ಓದಿಸಿದ್ದನು. ನನಗೆ ಇಬ್ಬರು ದೊಡ್ಡ ಅಣ್ಣಂದಿರೂ ಓರ್ವ ತಮ್ಮನೂ ಇದ್ದರು. ಒಬ್ಬಳೇ ಮಗಳಾದ ನನ್ನ ಮೇಲೆ ನನ್ನ ಮಾತಾಪಿತೃಗಳಿಗೂ ಅಣ್ಣ ತಮ್ಮಂದಿರಿಗೂ ಬಹಳ ಪ್ರೀತಿ, ಬಹಳ ಮಮತೆ. ಎಲ್ಲರ ಮಮತಾಮಣಿಯಾದ ನಾನು, ಚೆನ್ನಾಗಿ ವಿದ್ಯಾಭ್ಯಾಸಮಾಡಿದ ಆಧುನಿಕ ಮನೋವೃತ್ತಿ ಇರುವ ನಿಜಪ್ರೇಮಿಯೊಬ್ಬನನ್ನು ವಿವಾಹವಾಗಬೇಕೆಂದು ನನ್ನ ಮನಸ್ಸಿನಲ್ಲಿ ಕಲ್ಪಿಸಿ ಕೊಂಡಿದ್ದೆನು. ನನ್ನ ಆ ಹಗಲುಗನಸು ಒಂದು ದಿವಸ ನಿಜವಾಗಿ ಪರಿಣಮಿಸಿತು...." ಒಂದು ದೊಡ್ಡ ನಿಟ್ಟುಸುರನ್ನು ಬಿಟ್ಟು ಆ ತರುಣಿಯು ಮುಂದುವರಿಸಿದಳು.

"ನನ್ನ ಕೈಹಿಡಿದ ಸ್ವಾಮಿಯು ನನ್ನನ್ನು ಅತಿಯಾಗಿ ಪ್ರೀತಿಸುತ್ತಿದ್ದನು ಬಂಗಾಳ ದೇಶದಲ್ಲಿ ಎಲ್ಲರ ಆದರ ಸತ್ಕಾರಕ್ಕೆ ಪಾತ್ರರಾದ ಓರ್ವ ಚಿಕ್ಕ ಸಾಹಿತಿಯು ಅವರಾಗಿದ್ದರು. ನಾನು ಅವರನ್ನು ಅತಿಯಾಗಿ ಪ್ರೀತಿಸುತ್ತಿದ್ದಂತೆಯೇ, ಜನಸಮೂಹವೂ ಅವರನ್ನು ಪ್ರೀತಿಸುತ್ತಿದ್ದಿತು. ನಮ್ಮ ಆ ಚಿಕ್ಕ ಸಂಸಾರವು ಸುಖಮಯವಾಗಿ ಸಾಗುತ್ತಿತ್ತು.



ವಿಕ್ಟೋರಿಯಾ ಟರ್ಮಿನಸ್

ಮಹಾಶಯ್! ನಮ್ಮ ಬಂಗಾಳ ದೇಶದಲ್ಲಿರುವ ಕೆಲವೊಂದು ಹಿಂದೂ ಸಮಾಜವನ್ನು ನೀವು ಬಲ್ಲಿರಾ! ಆ "ಹಿಂದು"ವೆಂದು ಹೇಳಿಕೊಳ್ಳುತ್ತಿರುವಾತನು, ಹೃದಯದಲ್ಲಿಯೂ ನಡೆನುಡಿಯಲ್ಲಿಯೂ "ಹಿಂದೆ"ಆಗಿಹೋದ ತನ್ನ "ಹಿಂ "ನವರನ್ನೇ ಅನುಸರಿಸಿ, ತಾನು ಕೂಡ ಹೇಗೆ "ಹಿಂದು"ಳಿದು "ಹಿಂದು"ವಾಗಿಬಿಟ್ಟಿದ್ದಾನೆಂಬದನ್ನು ನೀವು ಬಲ್ಲಿರಾ! ಪಾಪ! ನೀವೇನು ಬಲ್ಲಿರಿ? ಆ ನಮ್ಮ "ಹಿಂದು" ಸಮಾಜವು "ಹಿಂದು"ಳಿದ ನಮ್ಮ "ಹಿಂದುಸ್ತಾನ"ದ ಅವನತಿಗೆ ಎಷ್ಟು ಸಹಾಯವನ್ನು ಮಾಡುತ್ತಿದೆಯೆಂಬದನ್ನು ನೀವೇನು ಬಲ್ಲಿರಿ! ಓರ್ವ ತರುಣಿಯನ್ನು ವಿವಾಹ ಮಾಡಿಕೊಡಬೇಕೆಂದರೆ ಕನ್ಯಾಪಿತನು ಎರಡು ಸಾವಿರ ರೂಪಾಯಿಗಳ ವರೆಗೆ "ದಂಡ" ತೆರಬೇಕಾಗಿದೆ. ಆ ದಂಡವನ್ನು 'ವರದಕ್ಷಿಣೆ'ಯೆಂದು ಕರೆಯುತ್ತಾರೆ, ಆ ನಿಮ್ಮ 'ಶಾಸ್ತ್ರದ ಪುಸ್ತಕದಲ್ಲಿ! ಮಹಾಶಯ್! ಹಾಗೆ ದಂಡ ತೆತ್ತು; ಕನ್ಯೆಯನ್ನು ಕಳುಹಿಸಿ ಕೊಟ್ಟ ಮೇಲೆ ತನ್ನ ಗಂಡನ ಮನೆಯಲ್ಲಿ ಸುಖವಿದೆಯೆಂದು ತಿಳಿಯುತ್ತೀರಾ? ಇಲ್ಲ. ತಾನು ಇನ್ನೊಂದು ಮದುವೆಯಾಗಿ ಇನ್ನೊಂದು ಎರಡು ಸಾವಿರ ದಕ್ಷಿಣೆ ಕೊಳ್ಳಬೇಕೆಂದು ಕೈ ಹಿಡಿದ ಪತ್ನಿಯನ್ನು ನಾನಾ ರೀತಿಯಿಂದ ಹಿಂಸಿಸುತ್ತಿರುವ 'ಪುರುಷ ಶ್ರೇಷ್ಠರು' ಬಂಗಾಳದಲ್ಲಿ ಬಹಳವಿದ್ದಾರೆಂದು ಹೇಳಿದರೆ ನೀವು ನಂಬುತ್ತೀರಾ? ಅತ್ತೆ, ಮಾವ, ನಾದಿನಿ, ಗಂಡ, ಇವರೆಲ್ಲಾ ಸೇರಿ ಅವಳಿಗೆಷ್ಟು ಕಿರುಕುಳವನ್ನು ಕೊಡುತ್ತಿದ್ದಾರೆಂಬುದನ್ನು ನಿಮಗೆ ತಿಳಿಯಲಪೇಕ್ಷೆಯಿದ್ದರೆ ನನ್ನೊಡನೆ ಬನ್ನಿ ತೋರಿಸಿ ಕೊಡುತ್ತೇನೆ. ಹಾಗೆ ಕಿರುಕುಳವನ್ನು ಸಹಿಸಲಾರದೆ ಮನೆಬಿಟ್ಟು ಓಡಿಹೋಗಿ, ದುರಾಚಾರಿಗಳ ಕೈಗೆ ಬಿದ್ದು ವೇಶ್ಯೆಯರಾದ ಅದೆಷ್ಟೋ ನಿರ್ಭಾಗ್ಯ ಸ್ತ್ರೀಯರನ್ನು ನಾನು ನಿಮಗೆ ತೋರಿಸಿ ಕೊಡಬಲ್ಲೆ. ಅಂಥ ಸಂದರ್ಭವನ್ನೇ ಕಾದು ಕುಳಿತಿರುವ ಆ "ಗಂಡ"ಂದಿರು ಎರಡನೆ ಯಾ ಮೂರನೆ ಮದುವೆಯನ್ನು ಮಾಡಿಕೊಂಡು ತನ್ನ ಧನ ಪಿಪಾಸೆಯ ಪರಮಾವಧಿಯನ್ನು ತೀರಿಸಿಕೊಂಡ ನಿದರ್ಶನವೆಷ್ಟೋ ನಾನು ತೋರಿಸಿಕೊಡಬಲ್ಲೆ!'

ಆ ತರುಣಿಯು ರೋಷದಿಂದ ಹೇಳುತ್ತಿದ್ದಾಗ ನಿಜವಿರಬಹುದೇ ಎಂಬ ಶಂಕೆಯು ನನ್ನನ್ನು ಬಾಧಿಸುತ್ತಿತ್ತು. ನಿಜವೇ ಇರಲಿ ಸುಳ್ಳೇ ಇರಲಿ ತನ್ನ ದೌರ್ಭಾಗ್ಯಕ್ಕಾಗಿ ಆ ತರುಣಿಯು ಹಿಂದೂ ಸಮಾಜವನ್ನೇಕೆ ದೂರುತ್ತಾಳೆಂಬುದು ನನಗೆ ಆಲೋಚಿಸಬೇಕಾಗಿದ್ದ ಒಂದು ಹೊಸ ಸಮಸ್ಯೆಯಾಗಿತ್ತು.

ಅವಳು ಪುನಃ ತನ್ನ ಆತ್ಮಕಥೆಯು ನ್ನು ಮುಂದುವರಿಸುತ್ತಿದ್ದಾಗ, ಅವಳ ಅವಳ ಹೃದಯದಲ್ಲಿ ರೋಷಕ್ಕೆಬದಲು ದುಃಖವು ಮೂಡಿತ್ತು.

'ಮಹಾಶಯ್! ಆದರೆ ನನ್ನ ಚರಿತ್ರೆಯು ಹಿಂದೂ ಸಮಾಜ ನೀತಿಯ ಇನ್ನೊಂದು ಮುಖ! ನನಗೆ ನನ್ನ ಪತಿಯು ಯಾವ ತೊಂದರೆಯನ್ನೂ ಕೊಡುತ್ತಿರಲಿಲ್ಲ. ನಾವಿಬ್ಬರೂ ಅನ್ಯೋನ್ಯವಾಗಿ ಪ್ರೇಮ ಸಾಗರದಲ್ಲಿ ಓಲಾಡುತ್ತಿದ್ದೆವು. ಆದರೆ...!

ಆದರೆ-ಆ ಪ್ರೇಮ ಸಾಗರಕ್ಕೆ ವಿಧಿಯೊಂದು ದೊಡ್ಡ ಅಲೆಯಾಗಿ ಬಂದು ನನ್ನ ಪ್ರಿಯತಮನನ್ನು ಕೊಚ್ಚಿಕೊಂಡು ಹೋಯ್ತು. ನನ್ನ ಸೌಭಾಗ್ಯ ಮಾಲೆಯು ತುಂಡರಿಯಿತು. ನನ್ನ ಕುಂಕುಮವು ಮಾಯವಾಯ್ತು! ನಾನು ವಿಧವೆಯಾದೆ....ವಿಧವೆ!'

ಆ ತರುಣಿಯು ಅಷ್ಟು ಹೇಳಿ ಗೊಳೋ ಎಂದು ಅಳಲು ತೊಡಗಿದಳು. ಉಕ್ಕಿ ಬರುತ್ತಿರುವ ಅವಳ ದುಃಖವು ಶಮನಗೊಂಡು ಪುನಃ ಅವಳ ಚರಿತ್ರೆಯು ಮುಂದುವರಿಯಬೇಕಾದರೆ, ಅರ್ಧ ಗಂಟೆ ಬೇಕಾಯ್ತು.

'ನಾನು ವಿಧಿಯ ಲಿಖಿತದಂತೆಯೋ ಅದೇನೋ ಹಾಳೋ ವಿಧವೆಯಾದೆ ಮಹಶಯಾ! ಆದರೆ, ಬಂಗಾಳ ದೇಶದಲ್ಲಿ ವಿಧವೆಯೆಂದರೆ, ಜೀವಿಸುತ್ತಿರುವ ಒಂದು ಶವ! ಸಾಯಲುಬಿಡದೆ ನಿರ್ಬಂಧದಲ್ಲಿಟ್ಟಿರುವ ಒಂದು ಮಹಾ ಕುಷ್ಠರೋಗಿಯ ಜೀವನದಂತೆಯೇ, ವಿಧವೆಯೋರ್ವಳ ಜೀವನ. ನಾನು ನನ್ನ ಗಂಡನ ಮನೆಯವರ ಆಶ್ರಯವನ್ನು ಪಡೆದು ಅವರ ಹತ್ತಿರ ಹೋದಾಗ ಅವರ ಹೃದಯದಲ್ಲಡಗಿದ್ದ ಅನಾದರಣೆಯ ಚಿನ್ಹೆಯು ನನಗೆ ಚೆನ್ನಾಗಿ ಅರಿವಾಯ್ತು. ಪರಂಧಾಮುವನ್ನೈದಿದ ನನ್ನ ಪತಿಯ ಅಕಾಲ ಮರಣಕ್ಕೆ ನನ್ನ ಹಣೇ ಬರೆಹವೇ ಕಾರಣವಾದ್ದರಿಂದ ಆ ನನ್ನ ಹಣೆಯನ್ನೇ ಜಜ್ಜಿ ಹೊಡೆದು ಚೂರು ಮಾಡಿ ಚಟ್ನಿ ಮಾಡಿ ಬಿಡಬಾರದೇಕೆ? ಎಂಬ ಭಾವನೆಯು ಅವರ ಹೃದಯದಲ್ಲಿ ಓಲಾಡುತ್ತಿತ್ತು. ನನ್ನ ಮಾವನವರಾಗಲೀ, ಭಾವರಾಗಲೀ, ಕಾರ್ಯಾರ್ಥವಾಗಿ ಹೊರ ಹೊರಟಾಗ ಆಕಸ್ಮಾತ್ತಾಗಿ ನಾನು ಎದುರಾದರೆ, ಹಾಳು ಅಪಶಕುನವಾಯಿತೆಂದು ನನಗೆ ನೂರಾರು ಬೈಗಳು ಸಿಕ್ಕುತ್ತಿದ್ದವು. ದಿನದ ಇಪ್ಪತ್ತನಾಲ್ಕು ಗಂಟೆ ಮನೆಯ ಮೂಲೆಯೊಂದರಲ್ಲೇ ಕುಳಿತಿರುವುದು ನನ್ನ ಭಾಗ್ಯವಾಗಿತ್ತು. ಕೆಲವೇ ದಿವಸಗಳಲ್ಲಿ ನಾನು ಅವರ ಮನೆಯ ಸಂಬಳವಿಲ್ಲದ ಸೇವಕಿಯಾಗಿ ಪರಿಣಮಿಸಿದ್ದು ನನಗೆ ಗೋಚರವಾಯ್ತು.

ನಾನು ನನ್ನ ಹುಟ್ಟಿದ ಮನೆಗೆ ಹೋಗಿ ನನ್ನ ತಂದೆ ತಾಯಿಯವರ ಆಶ್ರಯವನ್ನೇ ಪಡೆಯುವದು ಉತ್ತಮವೆಂದು ಭಾವಿಸಿದೆನು. ಮಹಾಶಯ್ ತಮಗೆ ಹೇಳಲು ಮರೆತಿದ್ದೆ! ನಾನಾಗ ಏಳು ತಿಂಗಳ ಗರ್ಭಿಣಿ...'

ತರುಣಿಯು ಆಗ ಏಳು ತಿಂಗಳ ಗರ್ಭಿಣಿಯಾಗಿದ್ದಳೆಂದು ಕೇಳಿ ಆ ಮಗುವು ಈಗ ಏನಾಯಿತೆಂದು ತಿಳಿಯುವ ಕುತೂಹಲವು ನನ್ನನ್ನು ಬಾಧಿಸುತ್ತಿದ್ದುದರಿಂದ 'ಮಗುವು ಎಲ್ಲಿ?' ಎಂದು ಕೇಳಿದೆನು.

'ಮಗುವು ಈಗ ನನ್ನ ಗಂಡನ ಮನೆಯವರ ಹತ್ತಿರವಿದೆ. ಅದು ಗಂಡು ಮಗುವಾಗಿತ್ತು' ಇರಲಿ, ಆ ಮೇಲೇನಾಯಿತೆಂಬದನ್ನು ಕೇಳಿ! ನಾನು ನನ್ನ ಮಾತಾಪಿತೃಗಳ ಆಶ್ರಯವನ್ನು ಪಡೆಯಲಿಕ್ಕಾಗಿ, ಅವರ ಹತ್ತಿರ ತೆರಳಿದೆನು. ಆದರೆ ಆದರೆ ಅವರೂ ನನ್ನಂತೆಯೇ ಅಬಲೆಯಾದ ಓರ್ವಳಿಗೆ ಅತ್ತೆ ಮಾವಂದಿರಾಗಿದ್ದರು. ಮೊದಲಿನ ಆದರ ಪ್ರೇಮವು ಈಗ ಇರಲಿಲ್ಲ. ವಿಧವೆ' ಅರ್ಥಾತ್, ಅಪಶಕುನ ಮೂರ್ತಿ, ಪಾಪಿಯ ಅಧಿದೇವತೆ, ನಿರ್ಭಾಗ್ಯದೇವತೆ, ಗಂಡನನ್ನು 'ತಿಂದು' ಹೊಟ್ಟೆ ಹೊರೆದುಕೊಂಡ ರಾಕ್ಷಸೀ, ಅದೇನೆಂದಾದರೂ ನೀವು ಕರೆಯಿರಿ, ಅಂಥಾ ವಿಧವೆಯು ನಾನಾಗಿದ್ದೆ. ನನ್ನ ಗಂಡನ ಮನೆಯಲ್ಲಿ ಸಾಗಿಸುತ್ತಿದ್ದ ಜೀವನಕ್ಕೂ ನನ್ನ ಸ್ವಂತ ಮನೆಯಲ್ಲಿ ಸಾಗುತ್ತಿದ್ದ ಜೀವನಕ್ಕೂ ಯಾವ ವ್ಯತ್ಯಾಸವೂ ಇರಲಿಲ್ಲವೆಂಬುದನ್ನು ಸ್ವಲ್ಪ ದಿವಸದಲ್ಲಿಯೇ ಮನಗಂಡೆನು. ಬೆಕ್ಕಿನಿಂದ ಪಾರಾಗಲು ಇಲಿಯು ಬೋನಿನ ಮರೆಹೊಕ್ಕಂತಾಗಿತ್ತು ನನ್ನ ಸ್ಥಿತಿಯು. ಮಹಾಶಯ್! ನನ್ನ ಮಾತನ್ನು ನೀವು ನಂಬುವದಿಲ್ಲ ಅಲ್ಲವೇ? ಪಾಪ! ನೀವೇಕೆ ನಂಬುತ್ತೀರಿ? ನೀವು ಪ್ರಪಂಚವಾದಿ! ನಾಳೆ ನನ್ನಂಥ ಅಬಲೆಯೋರ್ವಳ ಮಾಲಿಕರಾಗುವಿರಿ! ನಾಡದು ಮತ್ತೋರ್ವ ಅಬಲೆಯ ಮಾವಂದಿರಾಗುವಿರಿ....!''

''ಇಲ್ಲ ತಂಗೀ! ನಾನು ಆದರ್ಶವಾದಿ! ಪ್ರಪಂಚ ವಾದಿಯಲ್ಲ!'' ಎಂದು ಗಂಡಸು ಜಾತಿಯನ್ನು ರಾಕ್ಷಸ ವರ್ಗಕ್ಕೆ ಸೇರಿಸಿದ್ದ ಆ ತರುಣಿಗೆ ಹೇಳಿದೆನು. ಅವಳು ನಿಟ್ಟುಸಿರು ಬಿಟ್ಟು ತನ್ನ ಕತೆಯನ್ನು ಮುಂದುವರಿಸಿದಳು.

(ಮುಂದರಿಯುವುದು)

---

ಮುಖಪತ್ರದ ಚಿತ್ರ

## ಮಿಸ್. ಮಾಧುರಿ

# ವಾರದ ಭವಿಷ್ಯ

ತಾರೀಕು ೭-೭-೧೯೪೮ರಿಂದ ೧೩-೭-೧೯೪೮ರ ವರೆಗೆ.

ಜ್ಯೋತಿಷ್ಕರು:--
ಬಾಲಭಾಸ್ಕರರು.

## ಮೇಷ:

ಯುಕ್ತಾಯುಕ್ತ ವಿಚಾರಶಕ್ತಿಯ ಹ್ರಾಸದಿಂದಾಗಿಯೂ, ವಿಚಾರ ಪರಿಪ್ಲುತಗಳ ಆಂದೋಲನದಿಂದಲೂ ಮುಂದೇನುಮಾಡಬೇಕೆಂಬ ವಿಷಯವು ಮನಸ್ಸಿಗೆ ಹೊಳೆಯದು. ನಂಟರಿಷ್ಟರಲ್ಲೂ ಗುರುಹಿರಿಯರಲ್ಲೂ ವಿವೇಕಭಾವದಿಂದಿರಲಾರಿರಿ. ಹೊಳೆಯುವುದೆಲ್ಲಾ ಚಿನ್ನವೆಂದು ತಿಳಿದು ಭ್ರಾಂತರಾಗಿ ಮೋಸಹೋಗುವ ಸಂಭವವಿದೆ. ವಿದ್ಯಾಜೀವಿಗಳಿಗೂ ವ್ಯಾಪಾರೀ ಜನರಿಗೂ ಆರ್ಥಿಕಭಾಗವು ವೃದ್ಧಿಹೊಂದುವುದು. ರಾಜಕೀಯ ಕ್ಷೇತ್ರದಲ್ಲಿನ ಕಾರ್ಯಗಳು ಅನುಕೂಲವಾಗಿ ಕೊನೆಹೊಂದುವಂತಿದ್ದರೂ ಕೆಲವು ಮುಂದೆ ಬೀಳಲಿದೆ. ಆರೋಗ್ಯದ ವಿಚಾರದಲ್ಲಿ ಹೆಚ್ಚಿನ ಜಾಗರೂಕರಾಗಿರಿ. ಆಕಸ್ಮಿಕವಾಗಿ ಪ್ರಯಾಣಗಳು ಪ್ರಾಪ್ತವಾಗುವವು ನಿಮ್ಮ ಕಾರ್ಯಸಾಧನೆಗಾಗಿ ಯಾರ ಸ್ನೇಹವನ್ನೂ ಮಾಡಲು ಹಿಂಜರಿಯಲಾರಿರಿ. ವಿರೋಧಿಗಳ ಬೆದರಿಕೆಗೆ ಅಂಜದೆ ಶಕ್ತಿಮೀರಿ ಕಾರ್ಯವನ್ನು ಪೂರೈಸಲು ಹೆಣಗಾಡುವಿರಿ. ತಾ. ೧೧. ೧೨ ೧೩ ಈ ಮೂರು ದಿನಗಳು ಇದ್ದುದರಲ್ಲಿ ಉತ್ತಮವಾಗಿವೆ. ಬರುವ ವಾರದಲ್ಲಿ ನಿಮ್ಮ ಅದೃಷ್ಟವು ಅವನತಿಯನ್ನೈದಲಿದೆ.

## ವೃಷಭ:

ನಿಮ್ಮ ಶಕ್ತಿಸಾಹಸಗಳನ್ನು ಪ್ರದರ್ಶಿಸಲು ನೀವೆಳಸುವಿರಾದರೂ ಅದಕ್ಕೆ ತಕ್ಕುದಾದ ಚಾತುರ್ಯವು ನಿಮ್ಮಲ್ಲಿಲ್ಲದಿರುವುದೊಂದು ದೊಡ್ಡ ಕಳಂಕವಾಗಿದೆ. ನೀವೆಷ್ಟೇ ಮಿತವ್ಯಯವನ್ನನುಸರಿಸಿದರೂ ಖರ್ಚನ್ನು ಹಿಡಿತಕ್ಕೆ ತಂದಿರಿಸಲು ಸಾಧ್ಯವಾಗುವಂತಿಲ್ಲ. ಕಾರಣ ಲಾಭ ಭಾಗ್ಯಪತಿಗಳಾದ ಗುರುಶನಿಗಳು ವ್ಯಯ ಸ್ಥಾನದಲ್ಲಿ ಬಲವಾಗಿ ಕುಳಿತಿರುವರು. ಉದ್ಯೋಗದಲ್ಲಿ ತಪ್ಪಿಗೆ ಸಿಲುಕಿ ಅಧಿಕಾರಿಗಳ ಪೀಡೆಗೆ ಗುರಿಯಾಗಲಿರುವಿರಿ. ವಿರೋಧಿಗಳ ಉಪದ್ರವವು ಕಡಿಮೆಯಾಗುವಂತಿಲ್ಲ. ಪ್ರಯಾಣದಲ್ಲಿ ಹೆಚ್ಚಿನ ಕಷ್ಟನಷ್ಟಗಳು ಸಂಭವಿಸಲಿವೆ. ದೇಹಾರೋಗ್ಯದ ಸಲುವಾಗಿ ಹೆಚ್ಚಿನ ಹಣವನ್ನು ವ್ಯಯಿಸುವಿರಿ. ಮನೋವ್ಯಥೆಯಿಂದ ಪೀಡಿತರಾದ ನಿಮಗೆ ಸಂಸಾರದಲ್ಲಿ ಕೊಂಚ ನೆಮ್ಮದಿಯೂ ಸಿಗುವದು. ದುಡಿಮೆಗೆ ತಕ್ಕ ಫಲವೂ ಸಿಗುವುದು. ಸಮಾಜ ಸೇವೆಯಲ್ಲಿ ಕೀರ್ತಿಪಡೆವಿರಿ. ವ್ಯಾಪಾರಿಗಳಿಗೆ ಹೆಚ್ಚಿನ ಅನಿಷ್ಟವುಂಟಾಗದು. ತಾ. ೭. ೧೩ ಈ ಎರಡು ದಿನಗಳು ಇದ್ದುದರಲ್ಲಿ ಉತ್ತಮವಾಗಿವೆ. ಮೇಲಿನ ವಾರ ಕೆಲಭಾಗಗಳಲ್ಲಿ ಸುಧಾರಣೆ ಹೊಂದುವಿರಿ.



## ಮಿಥುನ:

ಹಲವು ವಿಚಾರಗಳಲ್ಲಿ ನಿಮಗೀ ವಾರವು ಉತ್ತಮ ಫಲದಾಯಕವಾಗಿದೆ. ನಿಮ್ಮ ಕುಶಲಮತಿಯ ಸಹಾಯದಿಂದ ದುಃಸಾಧ್ಯವಾದ ಕಾರ್ಯವೂ ಸುಗಮವಾಗುವುದು. ನಿಮ್ಮ ದುಡಿಮೆಯ ಫಲವಾಗಿ ಆರ್ಥಿಕ ಪರಿಸ್ಥಿತಿಯು ಸುಧಾರಣೆಯಾಗಲಿದೆ. ವಿದ್ಯೋಪಜೀವಿಗಳೂ ವಣಿಗ್ ಜನರೂ ಸೇವಕ ವರ್ಗದವರೂ ತಂತಮ್ಮ ದಿನಗಳನ್ನು ಸುಖದಿಂದ ಕಳೆಯಲಿರುವರು. ಆದರೆ ರಾಜಕೀಯ ಕ್ಷೇತ್ರದಲ್ಲಾಗಲಿ ಕೋರ್ಟು ವಗೈರೆಗಳ ಕಾರ್ಯಗಳಲ್ಲಾಗಲಿ ಸದ್ಯಕ್ಕೆ ಕೈಹಾಕಬೇಡಿರಿ. ಸ್ವದೇಹದ ಸಲುವಾಗಿ ಕೊಂಚ ಜಾಗರೂಕರಾಗಿರಿ. ಕಾರಣ ಆಹಾರ ದೋಷದಿಂದಲೂ ಪಿತ್ಥೋಷ್ಣ ವಿಕಾರದಿಂದಲೂ ಆರೋಗ್ಯವು ಕೆಡಲಿದೆ. ಧನ ಧಾನ್ಯ ಪಶು ಪರಿಜನ ಪತ್ನೀಪುತ್ರರಿಂದ ಕೂಡಿದ ಸಂಸಾರದಲ್ಲಿ ಆದಾವ ಭಾಗಕ್ಕೂ ನ್ಯೂನತೆಯುಂಟಾಗಲಾರದು. ಸಿಟ್ಟನ್ನು ಜಯಿಸುವುದು . ನಿಮ್ಮ ಮುಖ್ಯ ಕಾರ್ಯಗಳಲ್ಲೊಂದಾಗಿದೆ. ತಾ. ೮. ೯. ೧೦ ಈ ಮೂರು ದಿನಗಳು ಹೆಚ್ಚಿನ ಅನುಕೂಲಕಾರಿಗಳಾಗಿರುವುದರಿಂದ ಧನವಸನಾದಿಗಳ ಲಾಭ, ಕಾರ್ಯಜಯ, ಸ್ತ್ರೀಸುಖ ಮೊದಲಾ

ದುವುಗಳು ಲಭಿಸಲಿವೆ. ಮುಂದಿನ ವಾರವೂ ಇದೇ ರೀತಿ ಮುಂದರಿಯಲಿದೆ.

## ಕರ್ಕಾಟಕ:—

ದುರ್ದೈವೀ ನರನಿಗೆ ಆಪತ್ಪರಂಪರೆಗಳು ಸಮುದ್ರದಲ್ಲಿನ ಅಲೆಗಳಂತೆ ಮೇಲಿಂದ ಮೇಲೆ ಬರುವುದು ನಿತ್ಯವೂ ನಮ್ಮ ದೃಷ್ಟಿಗೆ ಗೋಚರವಾಗುವುದಷ್ಟೆ. ಸದ್ಯ ನಿಮ್ಮ ದೈವವು ಅತೀವ ದುರ್ಬಲವಾಗಿರುವುದರಿಂದ ಪ್ರಕೃತದಲ್ಲಿ ಏನೇನು ವಿಪತ್ತು ಯಾರ್‍ಯಾರಿಂದ ಯಾವ ಕಾಲಕ್ಕೆ ಒದಗುವುದೆಂದು ಹೇಳುವುದೂ ಕಷ್ಟದ ಮಾತಾಗಿದೆ. ದುರ್ವಿಚಾರಗಳಿಂದ ಮನಸ್ಸು ಕಲುಷಿತವಾಗಿರುವುದು. ಮಾತಿನಲ್ಲಿ ನೈಷ್ಠುರ್ಯವು ಹೆಚ್ಚುತ್ತಿರುವುದು. ಏತತ್ಫಲವೋ ಎಂಬಂತೆ ಮಿತ್ರಬಂಧುಗಳೂ ನಿಮ್ಮ ಕೈಬಿಡುವರು. ಮಾತ್ರವಲ್ಲ ವೈರಿ ಜನರು ಪ್ರತಿಕ್ರಿಯೆಯನ್ನು ಸರ್ವತೋಮುಖದಿಂದ ಮಾಡಬಯಸುವರು. ವಿದ್ಯೆಗೆ ತೊಡಕೂ ಯಶಸ್ಸಿಗೆ ಮಾಲಿನ್ಯವೂ ಬರಲಿದೆ. ಆಕಸ್ಮಿಕ ಅಪಘಾತಾದಿಗಳಿಗೆ ಸಿಲುಕಿ ದೇಹಾಪಾಯಕ್ಕೆ ಗುರಿಯಾಗಲಿರುವಿರಿ. ತಾ. ೭. ೧೧. ೧೨ ಈ ಮೂರು ದಿನಗಳಲ್ಲಿ ಕೆಲವೊಂದು ಗ್ರಹರ ಬಲದಿಂದಾಗಿ ಸುಖಭೋಜನ ತತ್ತದ್ದಿನದ ಖರ್ಚಿಗೆ ಬೇಕಾಗುವಷ್ಟು ಧನವೂ ಲಭಿಸೀತು. ಬರುವ ವಾರವೂ ಇಷ್ಟಪ್ರದವಾಗಿರದು.

## ಸಿಂಹ:—

ಶಕ್ತಿಮೀರಿ ದುಡಿಯುವಿರಿ. ಮನಬಂದಂತೆ ಖರ್ಚುಮಾಡುವಿರಿ. ದಿನಾಂತ್ಯದಲ್ಲಿ ಕೈಯಲ್ಲೊಂದು ಕಾಸೂ ಉಳಿಯಲಾರದು. ಹೀಗಿದೆ ನಿಮ್ಮ ಪರಿಸ್ಥಿತಿ. ನೀವಾರಂಭಿಸಿದ ಕಾರ್ಯದಲ್ಲಿ ಫಲವು ಅತ್ಯತ್ತಮವಾಗಿ ದೊರೆಯುವುದು. ನಿಮ್ಮ ವಾಕ್ಚಾತುರ್ಯದಿಂದಲೂ ಬುದ್ಧಿಕೌಶಲದಿಂದಲೂ ರಾಜಸ್ಥಾನದಲ್ಲಿ ಸ್ಥಾನಮಾನಗಳನ್ನು ಹೊಂದುವಿರಿ. ಹೆಚ್ಚಿನ ಸಮಯವು ಮಿತ್ರಜನರ ಒಡನಾಟ ವಿಹಾರಗಳಿಂದಲೇ ಗತಿಸಿಹೋಗುವದು. ವೈದ್ಯರೂ ವಕೀಲರೂ ಸ್ವವೃತ್ತಿಯಲ್ಲಿ ಯಶಸ್ಸಂಪಾದಿಸುವರು. ಆದರೆ ನಿಮ್ಮ ಧರ್ಮದಲ್ಲಿನ ಅನಾದರದ ಫಲವಾಗಿ ಕನಸಿನಲ್ಲೂ ಎಣಿಸದ ಆಪತ್ತುಗಳು ಥಟ್ಟನೆ ಬಂದೊದಗುವವು. ದೇಹಾಲಸ್ಯವೂ ತಲೆದೋರಲಿದೆ. ಕೆಲವೊಮ್ಮೆ ಶತ್ರುಜನರ ಕುಯುಕ್ತಿಗೆ ಬಲಿಬಿದ್ದು ನಷ್ಟ ಕಷ್ಟಗಳನ್ನೂ ಅನುಭವಿಸಲಿರುವಿರಿ. ಕಲಹನಿಮಿತ್ತ ಧನವು ನಷ್ಟವಾಗಲಿದೆ. ತಾ. ೭. ೧೧. ೧೨ ಈ ಮೂರು ದಿನಗಳು ವಿತ್ತಮಾನಗಳಿಗೆ ಹಾನಿಕಾರಿಗಳಾಗಿವೆ. ಬರುವ ವಾರ ಇಷ್ಟು ಅನುಕೂಲವಾಗಿರದು.

## ಕನ್ಯಾ:—

ಶಾರೀರಕ ಸುಖಹೀನರಾದ ನಿಮಗೆ ದೈವದೇವತೆಗಳ ಅನುಗ್ರಹವೂ ಗುರುಹಿರಿಯರ ಬೆಂಬಲವೂ ಸಾಕಷ್ಟಿಲ್ಲವಾದರೂ ಕಾರ್ಯಕರ್ತೃತ್ವ ಶಕ್ತಿಯೂ ಉತ್ಸಾಹವೂ ಪರಿಪೂರ್ಣವಾಗಿರುವುದು. ಆದಕಾರಣದಿಂದಲೇ ಯೇನ ಕೇನಾಪ್ಯುಪಾಯೇನ ನಿಮ್ಮ ಅನುದಿನದ ವೆಚ್ಚಕ್ಕೆ ಬೇಕಾದಷ್ಟು ಧನಧಾನ್ಯಗಳನ್ನು ಸಂಪಾದಿಸುವಿರಿ. ಬಂಧು ಮಿತ್ರರೂ ಇತರ ಜನಸಾಮಾನ್ಯರೂ ನಿಮ್ಮ ಬೆಂಬಲಕ್ಕಿರುವರು. ವ್ಯಾಪಾರಿಗಳಿಗೂ ಸಾಧು ಸಂತರಿಗೂ ಕಾಯಕಷ್ಟ ಜೀವಿಗಳಿಗೂ ಕಾಲಯಾಪನೆಯು ಕಷ್ಟವಾಗಿ ಪರಿಣಮಿಸುವದು. ಸ್ತ್ರೀಪುತ್ರರ ವಿರಹದಿಂದ ಮನಸ್ಸು ಅಶಾಂತಿಯನ್ನೈದುವುದು. ಪ್ರವಾಸಕ್ಕೀಸಮಯವು ಹಿತಕರವಾಗಲಾರದು. ಮಿತಭಾಷಿಯಾಗಿದ್ದರೂ ಕಲಹವು ಅನಿವಾರ್ಯ

ವಾಗಿರುವುದರಿಂದ ನಾಲಗೆಯನ್ನೂ ಬಿಗಿಹಿಡಿದಷ್ಟೂ ಒಳ್ಳೆತು. ತಾ. ೭. ೧೧. ೧೨ ಈ ಮೂರು ದಿನಗಳಲ್ಲಿ ಇಷ್ಟಕಾರ್ಯ ಸಿದ್ಧಿ ನಾನಾವಿಧ ಲಾಭ ಸುಹೃತ್ಸಮಾಗಮ ಮೊದಲಾದುವುಗಳಾಗುವವು. ಮುಂಬರುವ ವಾರದಲ್ಲಿ ಕೊಂಚ ವ್ಯತ್ಯಾಸವಾಗಲಿದೆ.

## ತುಲಾ:—

ದಿನೇ ದಿನೇ ನಿಮ್ಮ ಅದೃಷ್ಟವು ಉತ್ತಮವಾಗುತ್ತಾ ಬರುತ್ತಿದೆ. ಆದ ಕಾರಣದಿಂದ ನಿಮ್ಮ ಹಲವಾರು ತಾಪತ್ರಯಗಳು ಇಂದೀಗ ಅಗೋಚರವಾಗುತ್ತಾ ಬರುತ್ತಿವೆ. ಜನತೆಯಲ್ಲಿ ಒಳ್ಳೆಯ ಗೌರವಾದರಗಳನ್ನು ಹೊಂದುವಿರಿ. ಖರ್ಚಿಗಿಂತಲೂ ಆದಾಯವು ಒಂದಂಶ ಹೆಚ್ಚಿಗಿರುವುದರಿಂದ ಆರ್ಥಿಕ ಭಾಗದಲ್ಲಿ ಸುಧಾರಣೆಯಾಗುವುದು. ವಾಕ್ಚತುರತೆಯಿಂದ ವಿರೋಧಿಗಳನ್ನೂ ವಶಮಾಡಿಕೊಳ್ಳುವ ಶಕ್ತಿ ನಿಮ್ಮಲ್ಲಿರುವುದರಿಂದ ಕೈಗೊಂಡ ಕಾರ್ಯಗಳಿಗೆ ವಿಘ್ನಗಳು ಬರಲಾರವು. ಇಷ್ಟದಂತೆ ಫಲಾಪ್ತಿಯಾಗಲಿದೆ. ಗುರುಹಿರಿಯರಲ್ಲೂ ದೈವದೇವರುಗಳಲ್ಲೂ ಮುಂಚಿಗಿಂತ ಭಯಭಕ್ತಿಯಧಿಕವಾಗುವುದು. ಆಕಸ್ಮಿಕವಾಗಿ ಲೇವಾದೇವಿ ವಿಚಾರದಲ್ಲಿ ಕಲಹವುಂಟಾಗಲಿದೆ. ಪರ್ಯಟನವೂ ಕೂಡ ಸಂಭವಿಸೀತು. ತಾ. ೧೧. ೧೨ ಈ ದಿನಗಳಲ್ಲಿ ಅನಾವಶ್ಯಕಗಳಾದ ಖರ್ಚುಗಳು ಗಂಟುಬೀಳುವವು. ಮೇಲಿನ ವಾರ ಇನ್ನೂ ಉತ್ತಮ ಸ್ಥಿತಿಗೆ ಬರುವಿರಿ.

## ವೃಶ್ಚಿಕ:—

ಕಾಲವು ಗತಿಸಿದಂತೆ ಕನಿಷ್ಟವಾಗುವುದು. ದಿನೇ ದಿನೇ ನಿಮ್ಮ ದೇಹಸ್ಥಿತಿಯು ಕೆಡುತ್ತಾ ಬರುತ್ತಿದೆ. ಧಾತುಕ್ಷಯದಿಂದ ಶರೀರದಲ್ಲಿ ನಿಶ್ಶಕ್ತಿ ಹೆಚ್ಚಿ ದೂರದ ಪ್ರಯಾಣಕ್ಕೆ ತೊಂದರೆಯಾಗುವುದು. ಕಾರ್ಯಾರಂಭದ ಮುಂಚೆಯೇ ವಿಘ್ನಗಳು ಉಪಸ್ಥಿತವಾಗುವುದರಿಂದ ಏನೂ ಮಾಡದೆ ಕೈಕಟ್ಟಿ ಕುಳಿತುಕೊಳ್ಳಬೇಕಾದ ಪ್ರಸಂಗ ಬರುವುದು. ಗೃಹಜೀವನದಲ್ಲಿ ದಿನಹೋದಂತೆ ವೈರಾಗ್ಯ ಹೆಚ್ಚುವುದು. ಮಾನಸಿಕ ರೋಗವು ಬಲವತ್ತರವಾಗಿರುವ ಕಾರಣ ಯಾರೊಡನೆಯೂ ಮಾತುಕಥೆಗಳಿಗೆ ಮನಸ್ಸೊಪ್ಪದು. ಅತ್ಯಂತ ಕಷ್ಟದಿಂದ ದಿನಗಳೆಯತಕ್ಕ ನಿಮಗೆ ಆದಾಯಕ್ಕಿಂತಲೂ ವ್ಯಯವು ಹೆಚ್ಚಾಗುವುದರಿಂದ ಹಣದ ಬಿಕ್ಕಟ್ಟಿನಲ್ಲಿ ಸಿಲುಕಿ ಬಹಳೇ ಪೇಚಾಡುವಿರಿ. ಹಗಲೆಲ್ಲಾ ಕಷ್ಟದಿಂದ ಬಳಲಿದ ನಿಮಗೆ ರಾತ್ರಿಯು ಸುಖದಾಯಕವಾಗುವುದು. ತಾ. ೭. ೧೩ ಈ ಎರಡು ದಿನಗಳಲ್ಲಿ ಅತ್ಯಂತ ಜಾಗರೂಕರಾಗಿರಿ. ಬರುವ ವಾರವನ್ನು ಇದೇ ರೀತಿಯಿಂದ ಕಳೆಯಬೇಕಾಗುವುದು.

## ಧನು:—

"ಸ್ತ್ರೀಣಾಂ ಚ ಚಿತ್ತಂ ಪುರುಷಸ್ಯ ಭಾಗ್ಯಂ ದೇವೋ ನ ಜಾನಾತಿ ಕುತೋ ಮನುಷ್ಯಃ" ದೇವತೆಗಳಿಂದಲೂ ನಿರ್ಧರಿಸಲಶಕ್ಯವಾದ ಚಂಚಲಾಕ್ಷಿಯರ ಚಿತ್ತವನ್ನು ನೀವೆಂತು ನಿರ್ಧರಿಸುವಿರಿ. ಸ್ವಭಾವತಃ ಮನಸ್ಸು ಚಂಚಲವಾದುದು. ಅದರಲ್ಲಂತೂ ಚಂಚಲಾಕ್ಷಿಯರ ಮನಸ್ಸನ್ನು ಕೇಳಬೇಕೆ? ಒಲ್ಲದ ನರನು ಯಾವರೀತಿಯಲ್ಲಿ ವರ್ತಿಸಿದರೂ ಅವರಿಗದು ವಿಪರೀತವಾಗಿ ಭಾಸವಾಗುವದು. ಆದಕಾರಣ ನೀವೀ ಚಂಚಲೆಯರ ವಕ್ರದೃಷ್ಟಿಯಿಂದ ಪಾರಾಗುವ ಸಂಭವ ಕಾಣುವದಿಲ್ಲವು. ಚರ್ಮರೋಗದಿಂದ ಶರೀರಪೀಡೆಯೂ ಶತ್ರುಗಳ ಕಾಟದಿಂದ ಮನೋರೋಗವೂ ವೃದ್ಧಿಹೊಂದಲಿದೆ. ನಿಮ್ಮ ಉದ್ಯಮದಲ್ಲಿ ಪೂರ್ಣ ಪ್ರತಿಫಲ ದೊರೆಯುವುದರಿಂದ ಆರ್ಥಿಕ ಬಿಕ್ಕಟ್ಟುಂಟಾಗದು. ಗೃಹೋಪಕರಣಗಳೂ ಪೂರ್ಣವಾಗಿರುವವು. ಸದ್ಯದಲ್ಲೇ ಪುತ್ರ ಮುಖದರ್ಶನ ಲಾಭವೂ ಆಗಲಿದೆಯೆನ್ನಬಹುದು. ವಾರಾದಿಯ ನಾಲ್ಕು ದಿನಗಳಲ್ಲಿ ಪ್ರತಿಕೂಲಗಳೇ ಹೆಚ್ಚಾಗಲಿವೆ. ಮುಂದಿನ ವಾರದಲ್ಲೂ ಇದೇ ಪರಿಸ್ಥಿತಿಯಿದ್ದೀತು.

## ಮಕರ:—

ಈಗಿನ ಗ್ರಹಮಾನರೀತ್ಯಾ ನಿಮ್ಮ ಭವಿಷ್ಯವು ಅತೀವ ಚಿಂತಾದಾಯಕವಾಗಿರುವುದು. ಕಾಸು ಇಲ್ಲದ ನರ ಕಲ್ಲಿಗೆ ಸಮನೆಂಬ ಗಾದೆಯಂತೆ ನಿಮ್ಮ ಅವಸ್ಥೆ ಇಂದೀಗ ಬಂದಿದೆ. ಯಾವ ಉದ್ಯೋಗದಲ್ಲೂ ನಿಮಗೆ ಶ್ರೇಯಸ್ಸಿಲ್ಲವು. ಗ್ರಹದೋಷದಿಂದಾಗಿ ನಿಮ್ಮ ಮನಸ್ಸು ದುರಾಚಾರ ದುರ್ವ್ಯಾಪಾರಗಳಲ್ಲಿ ವಿಹರಿಸುತ್ತಿರುವುದರಿಂದ ನಿಮಗಾವ ಜನರ ಸಹಾನುಭೂತಿಯೂ ದೊರೆಯದಾಗಿದೆ. ಹಿತಬೋಧೆಯನ್ನೀಯತಕ್ಕವರೇ ನಿಮಗೆ ಶತ್ರುಗಳಂತೆ ಕಾಣುವರು. ನಿಮ್ಮ ನಡತೆಯು ನಿಮ್ಮ ಕೈಹಿಡಿದಾಕೆಗೂ ಸರಿಕಾಣದಾದ ಕಾರಣ ನಿತ್ಯ ನಿಮ್ಮೊಡನೆ ಜಗಳಾಡಲಿರುವಳು. ಆರೋಗ್ಯವೂ ತೃಪ್ತಿಕರವಾಗಿಲ್ಲವು. ವೈದ್ಯವೃತ್ತಿಯವರಿಗೆ ಹೆಚ್ಚಿನ ಕಷ್ಟಗಳು ಪ್ರಾಪ್ತವಾಗಲಾರವು. ತಾ. ೭. ೧೩ ಈ ಎರಡು ದಿನಗಳಲ್ಲಿ ಕೆಲವೊಂದು ಗ್ರಹರ ಬಲದಿಂದ ಮನಸ್ಸಿಗೆ ಶಾಂತಿ ದೊರೆಯುವದದು. ಬರುವ ವಾರದಲ್ಲಿ ಇನ್ನೂ ಹೆಚ್ಚಿನ ಕಷ್ಟಕ್ಕೆ ಸಿಲುಕರಿರುವಿರಿ.

## ಕುಂಭ:—

ಮನೋ ದೌರ್ಬಲ್ಯದಿಂದ ನೀವು ಕೆಲವೊಂದು ಕಾರ್ಯಗಳನ್ನು ವ್ಯರ್ಥವಾಗಿ ಹಾಳುಮಾಡುವಿರಿ. . ಬೇಕು

ಬೇಕಾದ ಅನುಕೂಲ್ಯವಿದ್ದೂ ನಿಮಗದನ್ನು ಉಪಯೋಗಿಸಿಕೊಳ್ಳಲು ತಿಳಿಯದೆ ಪಶ್ಚಾತ್ತಾಪಕ್ಕೆ ಗುರಿಯಾಗುವಿರಿ. ಸದ್ಯ ನಿಮ್ಮ ಅದೃಷ್ಟವು ಚೆನ್ನಾಗಿರುವುದು. ನೌಕರಿ ವ್ಯಾಪಾರ ವ್ಯವಹಾರಗಳಲ್ಲಿ ದಕ್ಷತೆಯಿಂದ ಕಾರ್ಯನಿರ್ವಹಿಸಿ ಈಗಿನ ಸ್ಥಿತಿಗಿಂತ ಉತ್ತಮ ಸ್ಥಿತಿಗೆ ಬರುವ ಶಕ್ತಿ ನಿಮ್ಮಲ್ಲಿದೆ. ಆರ್ಥಿಕ ಸಂಪತ್ತು ಬಹಳ ಉತ್ತಮ ರೀತಿಗೆ ಬರುವುದು. ವಿರೋಧಿ ಜನರು ವೈರಭಾವವನ್ನು ಬಿಟ್ಟು ನಿಮ್ಮ ಮೈತ್ರಿಯನ್ನಪೇಕ್ಷಿಸುವರು. ಬಂಧುಮಿತ್ರರ ಮತ್ತು ಜನತೆಯ ಬೆಂಬಲವೂ ನಿಮಗೆ ಉತ್ತಮವಾಗಿದೆ. ಸಂಸಾರವು ಸುಖಮಯವಾಗಿದ್ದರೂ ಸ್ವದೇಹದಲ್ಲಿ ವಾತಸಂಬಂಧವಾದ ಕಾಹಿಲೆಯು ಆಗಾಗ ಕಾಣಿಸಿಕೊಳ್ಳುವದು. ತಾ. ೭ರಿಂದ ೧೧ರ ವರೆಗಿನ ದಿನಗಳು ಅತ್ಯುತ್ತಮಗಳಾಗಿವೆ. ಮೇಲಿನ ವಾರದಲ್ಲಿ ನಿಮ್ಮ ಅದೃಷ್ಟವು ಇನ್ನೂ ಉತ್ತಮವಾಗಲಿದೆ.

## ಮೀನ:

ನಾನಾ ರೀತಿಯ ಎಡರು ತೊಡರುಗಳು ಬಂದು ನಿಮ್ಮ ಮನಸ್ಸನ್ನು ಗಾಳಿಗೆ ಬಿಟ್ಟ ಗಾಳೀಪಟದಂತೆ ಹಾರಿಸುವುದಾದರೂ ವಿವೇಕ ಶಕ್ತಿಯಿಂದ ನೀವದನ್ನು ಸ್ಥಿರೀಕರಿಸಲು ಶಕ್ತರಿರುವಿರಿ. ನಿಮಗೆಷ್ಟೇ ಹಣ ದೊರೆತರೂ ನಿಮ್ಮ ಬಿಕ್ಕಟ್ಟು ನಿವಾರಣೆಯಾಗುವಂತಿಲ್ಲ. ಸಂಸಾರದಲ್ಲಿ ಒಬ್ಬರಲ್ಲೊಬ್ಬರಿಗೆ ಕಾಹಿಲೆ ಇದ್ದೇ ಇರುವುದು. ಮನೆಯವರಲ್ಲಿ ಒಡಕು ಹುಟ್ಟಿ ಪರಸ್ಪರ ಭಿನ್ನಪಂಥವನ್ನನುಸರಿಸುವುದರಿಂದ ಎರಡನೆಯವರಿಗೆ ಎಡೆಕೊಟ್ಟಂತಾಗುವುದು. ಅತ್ಯವಶ್ಯವಾದ ವಸ್ತುವು ಕಾಲಕ್ಕೆ ಸರಿಯಾಗಿ ದೊರೆಯದೆ ಮಾನಹೋಗುವ ಪ್ರಸಂಗವೂ ಕೆಲವೊಮ್ಮೆ ಸಂಘಟಿಸುವುದು. ಆದರೂ ಮಿತ್ರರ ಪ್ರಬಲ ಆಶ್ರಯದಿಂದ ನೀವು ಅನೇಕ ಆಪತ್ತಿನಿಂದ ಸುಖವಾಗಿ ಪಾರಾಗುವಿರಿ. ವಾರದ ಆದ್ಯಂತ ದಿನಗಳು ಮಾತ್ರ ಹೆಚ್ಚಿನ ಪ್ರತಿಕೂಲಕಾರಿಗಳಾಗಿರುವುದರಿಂದ ತದ್ದಿನಗಳಲ್ಲಿ ವಿಶೇಷ ಜಾಗರೂಕರಾಗಿರಿ. ಮುಂದಿನ ವಾರದಲ್ಲೂ ಇದೇ ರೀತಿಯೇ ಕಂಡುಬರುತ್ತದೆ.

---



# "ಗೌರಮ್ಮನ ಪರೀಕ್ಷೆ"

ಕತೆಗಾರರು:

ಶ್ರೀಕೃಷ್ಣ ಕುಲಕರ್ಣಿ, ಬಗಡಗೇರಿ.



-೧-

ಹೊಂಗದಿರನ ಸುವರ್ಣ ಕಿರಣಗಳು ಆ ಶಾಲೆಯನ್ನು ಮುತ್ತಿಟ್ಟವು. ಮರಗಳ ಗುಂಪಿನೊಳಗಿಂದ ಸುತ್ತುಹಾಕಿ; ಅತ್ತ-ಇತ್ತ-ಸುತ್ತಲೂ ಬೆಳೆದಿರುವ ಮರಗಳನ್ನೆಲ್ಲ ಸ್ವರ್ಣಮಯವಾಗಿ ಮಾಡಿದ ಪ್ರಭಾಕರ ರಶ್ಮಿಗಳು ರವಿದೇವನು ಇಳೆಗೆ ಬೆಳಕನ್ನು ನೀಡಲು ಬಂದನೆಂದು ಸೂಚಿಸಿದವು. ಅತ್ತ ದೇವಮಂದಿರದಲ್ಲಿ ಗಂಟೆಗಳು ಮೊಳಗುತ್ತಿದ್ದವು. ಇತ್ತ ಶಾಲೆಯಲ್ಲಿ ಕೋಮಲ ಕಂಠದಿಂದ ವಿದ್ಯಾರ್ಥಿನಿಯರು ದೇವರನ್ನು ಮಂಗಲ ಪದ್ಯಗಳಿಂದ ಪ್ರಾರ್ಥಿಸುತ್ತಿದ್ದರು.

ಅದೊಂದು ದೊಡ್ಡ ಹಳ್ಳಿ. ಸುಮಾರಾಗಿ ನೂರಿನ್ನೂರು ಮನೆಗಳ ಹಳ್ಳಿ ಅದು-ಊರು ತುಸು ದೊಡ್ಡದೇ ಅದೆ. ಸುತ್ತಲೂ ಹುಲುಸುದುಂಬಿ ನಿಂತ ತೋಟಗಳಿವೆ. ತಮ್ಮ ಊರಿನ ಕೀರ್ತಿಯ ಬಾವುಟವನ್ನು ನಭಕ್ಕೆತ್ತಿ ಹಿಡಿದು, ಗೌರವ ಪ್ರದರ್ಶನ ಮಾಡುತ್ತಿರುವಂತೆ ತೆಂಗಿನ ಮರಗಳು ಮುಗಿಲುದ್ದ ಬೆಳೆದು ನಿಂತಿವೆ. ಹತ್ತಿರ ಹರಿಯುತ್ತಿರುವ ನದಿಯೊಂದು ಕಲಕಲ ನಿನಾದವನ್ನು ಮಾಡುತ್ತ ತನ್ನೂರಿನ ಹೆಚ್ಚಳದ ಮಂಜುಳ ಗೀತೆಗಳನ್ನು ಹೇಳುತ್ತ ಹೊರಟಂತಿದೆ. ಸುತ್ತಲೂ ಮರಗಳು-ಬೆಟ್ಟಗಳು-ಕಣಿವೆ-ಕಾಲುವೆಗಳು. ಊರಿನ ಅಂದವನ್ನು ಹೆಚ್ಚಿಸಲು ಸಹಾಯಕಾರಿಯಾಗಿವೆ.

ಗಂಡು-ಹೆಣ್ಣು ಹುಡುಗರಿಗಾಗಿ ಪ್ರತ್ಯೇಕವಾಗಿ ಎರಡು ಶಾಲೆಗಳಿವೆ. ಹೆಣ್ಣು ಹುಡಿಗೆಯರಿಗಾಗಿ ಆ ಊರಿನ ಗುಡಿಯಲ್ಲಿ ಶಾಲೆ ನಿರ್ಮಿತವಾಗಿದೆ. ಕನ್ನಡ ನಾಲ್ಕು ಇಯತ್ತೆಗಳ ವರೆಗೆ ಈ ಶಾಲೆಯಲ್ಲಿ ಬಾಲೆಯರಿಗೆ ಶಿಕ್ಷಣ ಕೊಡಲ್ಪಡುತ್ತದೆ ಬಾಲೆಯರು ಮುಂಜಾನೆ ಹೊಂಗದಿರನ ಸುವರ್ಣ ಕಿರಣಗಳು ವಸುಂಧರೆಯನ್ನಪ್ಪುತ್ತಿರುವಾಗ, ಮಂಜುಲ ಕಂಠದಿಂದ ದೇವತಾಸ್ತುತಿಯನ್ನು ಮಾಡುವ ಇನಿದನಿಯೂ, ಆದರೊಡನೆ ಕೆಲವೇಳೆಯ ನಂತರ ಶಿಕ್ಷಿತೆಯು ಹುಡಿಗೆಯರನ್ನು ಶಿಕ್ಷಿಸುತ್ತಿದ್ದಾಗಿನ ಅಳುದನಿಯೂ ಮಿಶ್ರರಾಗ ಮಾಲಿಕೆಯಂತೆ ಆ ಗುಡಿಯಿಂದ ಹೊರ ಬರುತ್ತದೆ.

ಗೌರಮ್ಮ ಈ ಊರಿಗೆ ಬಂದು ನಾಲ್ಕು ವರ್ಷಗಳಾದವು. ಆಕೆ ಒಳ್ಳೇ ಶಿಕ್ಷಿತೆಯೆಂದು ನಮ್ಮ ಊರಿನ ಪ್ರತಿಯೊಬ್ಬ ತಾಯಂದಿರಿಗೂ ಪ್ರೀತಳು. ಗೌರಮ್ಮ ಹದಿನೆಂಟು ವರುಷದ ಹುಡಿಗೆ. ಪರೀಕ್ಷೆಗೆ ಕಟ್ಟಿದವಳು ಪ್ಯಾಸಾಗುತ್ತಲೇ ನಮ್ಮ ಊರಿಗೆ ಬಂದುಬಿಟ್ಟಳು. ಗೌರಮ್ಮನಿಗೆ ವಿದ್ಯೆಯಿದ್ದಿತು-ರೂಪವಿದ್ದಿತು-ಗುಣವಿದ್ದಿತು.

ಆದರೆ......ಪ್ರಕೃತಿಯು ಒಂದೆಡೆಗೆ ಒಂದು ವರವನ್ನು ಕೊಟ್ಟಿರುವಾಗ ಮತ್ತೊಂದು ವರವನ್ನು ಉದ್ದೇಶಪೂರ್ವಕವಾಗಿ ಕೊಟ್ಟಿರುವದಿಲ್ಲವೇನೋ......? ಗೌರಮ್ಮನ ಮದುವೆಯು ಚಿಕ್ಕಂದಿನಲ್ಲಿಯೇ ಆಯ್ತು. ಹುಡುಗೆ ಹದಿನಾಲ್ಕು ವರ್ಷದವಳಾಗಿರಲಿಲ್ಲ. ಆವಳ ಗಂಡನು ಪ್ರಕೃತಿಯ ಸಾಲದಿಂದ ಋಣಮುಕ್ತನಾಗಿ ಹೋದನು. ಅವಳ ಬಾಳು ಕೊನೆಯ ವರೆವಿಗೂ ನಿರಾಶೆಯ ಮರುಭೂಮಿಯಲ್ಲಿಯ ಪಥಿಕನ ಪಯಣದಂತಾಯ್ತು.

ನಾಗಮ್ಮನವರು ಗೌರಮ್ಮನಿಗೆ ಕಷ್ಟಪಟ್ಟು ವಿದ್ಯೆ ಕಲಿಸಿದರು. ಬಡತನದ ಕಾಟದಲ್ಲಿಯೇ ಮಗುವಿಗೆ ತೊಂದರೆಯಾಗದಂತೆ, ಉದರ ನಿರ್ವಾಹವನ್ನು ಸಾಗಿಸಿ, ಇದ್ದ ಬಿದ್ದ ಪುಡಿಕಾಸುಗಳನ್ನು ಅವಳ ಪುಸ್ತಕ ಕಾಗದಗಳಿಗೆ ನೀಡಿ ಮಗಳನ್ನೊಮ್ಮೆ ಮುಲ್ಕಿ ಪರೀಕ್ಷೆಯ ಮೆಟ್ಟಲಿನಿಂದ ಪಾರುಗಾಣಿಸಿದಳು. ಅತ್ತೆಯ ಮನೆಯಲ್ಲಿ ಅವಳಿಗೆ ಆಧಾರವಿಲ್ಲ. ತಮ್ಮದಂತೂ ಬಲ್ಲರು ನಾಗಮ್ಮ

ನವರು. ಗೌರಮ್ಮನ ಭಾವೀ ಜೀವಮಾನವು ಮಾನದಿಂದ ಸಾಗಿಹೋಗುವಂತೆ ಅವಳಿಗೆ ವಿದ್ಯೆಯು ಆಧಾರವಾದರೂ ಬೇಡವೇ. ನಾಗಮ್ಮನವರ ಫಲಕಾರಿಯಾದೀ ಯೋಚನೆಯು ಗೌರಮ್ಮಳನ್ನೊಬ್ಬ ಉಪಾಧ್ಯಾಯಿನಿಯನ್ನಾಗಿ ಮಾಡಿತು.

-೨-

ಮದುವೆಗೆ ಬೇಕಾಗುವ ಸಾಧನಗಳನ್ನು ಕೂಡಿಸಿಡಲು ಮದುವೆಯ ಮನೆಯಲ್ಲಿ ಗಲಾಟೆಯೇ ಗಲ ಟಿ ನಡೆದು ಬಿಟ್ಟಿರುತ್ತದೆ. ಹಪ್ಪಳ ಸಂಡಿಗೆ ಮಾಡುವದು. ಉಂಡಿಗಳನ್ನು ಕಟ್ಟುವದು. ಏನನ್ನು ಬೇಕೋ ಎಲ್ಲವನ್ನು ಶೇಖರಿಸುವದು. ಎಪ್ರೀಲು ತಿಂಗಳೆಂದರೆ ಶಿಕ್ಷಕ-ಶಿಕ್ಷಕಿಯರಿಗೆ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಹಬ್ಬದ-ಮದುವೆಯ ದಿನಗಳಿದ್ದಂತೆ. ಎಷ್ಟು ದುಡಿದರೂ ಕಮ್ಮಿ ಆಗ, ಹಗಲು ರಾತ್ರಿಗಳೆನ್ನದೆ ಹೊತ್ತಿಗೆಯಲ್ಲಿನ ವಿಷಯವನ್ನೆಲ್ಲಾ ತಲೆಯಲ್ಲಿ ಸೇಖರಿಸುವದು. ಶಿಕ್ಷಕರು ಅಚ್ಚುಕಟ್ಟಾಗಿ ಶಾಲೆಯನ್ನು ಸಿಂಗರಿಸುವದು. ಹೀಗೆಲ್ಲಾ ಸಮಯವು ಕಳೆದು ಹೋಗುತ್ತದೆ. ಮದುವೆಯ ಮುಹೂರ್ತದಂತೆ ಆ ಪರೀಕ್ಷೆಯ ಸಮಯವೂ ಬರುತ್ತದೆ.

ಗೌರಮ್ಮ ಅದೆಷ್ಟೋ ಬಗೆಯಾಗಿ ಹುಡಿಗೆಯರನ್ನು ಶಿಕ್ಷಣಕೊಟ್ಟು ಸಿದ್ಧಮಾಡಿಟ್ಟಿದ್ದಳು, ಶಾಲೆಯನ್ನಲಂಕರಿಸಿದ್ದಳು. ಒಮ್ಮೆ "ಗುಡ್ ರಿಮಾರ್ಕ್" ಪಡೆಯಲು ಬೇಕಾಗುವಂತಹ ವ್ಯವಸ್ಥೆ ಮಾಡಿಟ್ಟಿದ್ದಳು.

ಎಪ್ರೀಲ ಹದಿಮೂರನೆಯ ತಾರೀಕು, ಇಂದು ಗೌರಮ್ಮನಿಗೆ ಅವಳ ವಿದ್ಯಾರ್ಥಿನಿಯರಿಗೆ ಆನಂದವೇ ಆನಂದ! ಈ ದಿನ ಅವಳ ಶಾಲೆಯ ಪರೀಕ್ಷೆಯು ನಡೆದು ಹೋಗುವದು, "ನನ್ನ ವಿದ್ಯಾರ್ಥಿನಿಯರು ಬೇಕಾದ ಹಾಗೆ ತರಬೇತಾಗಿದ್ದಾರೆ. ಶಾಲೆಯ ವ್ಯವಸ್ಥೆ ಚೆನ್ನಾಗಿದೆ. ಮನವಮುಟ್ಟಿ ಕೆಲಸ ಮಾಡಿದ್ದೇನೆ ನಾನು. ನನ್ನ ಯತ್ನಕ್ಕೆ ದೇವರು ಯಶದೋರಲಾರನೆ! ಈ ಸಲ." "ಗುಡ್ ರಿಮಾರ್ಕ್ಸ ಪಡೆದು ನನ್ನನ್ನು ಕೋಲೇಜಿಗೆ ಆರಿಸುವಂತೆ ಪ್ರಾರ್ಥಿಸಿದರೆ......" ಅವಳ ವಿಚಾರದ ಹೊಳೆಯು ವೇಗವಾಗಿ ಹರಿಯುತ್ತಿದೆ. ಭಾವೀ ಉತ್ಕರ್ಷವನ್ನು ನೀಡಬರುವವರಿಗಾಗಿ ಅವಳು ಅನೇಕ ತೆರೆದ ಉಪಚಾರಗಳನ್ನು ಸಿದ್ಧಮಾಡಿಟ್ಟಿದ್ದಾಳೆ. ಈ ಆದರೋಪಚಾರಗಳಿಂದ ದೇವರು ಕರುಣಿಸಲಾರನೇ! ಅವಳು ಕೊನೆಗೊಮ್ಮೆ ಕೊಲೇಜ ಸೇರಬಹುದು-

ಪರೀಕ್ಷಕರು ಶಾಲೆಗೆ ಚಿತ್ತಯಿಸಿದರು. ಹುಡಿಗೆಯರು ಅವರನ್ನು ಸ್ವಾಗತ ಪದ್ಯಗಳಿಂದ ಸನ್ಮಾನಿಸಿದರು. ಶಿಕ್ಷತಿಯೂ, ಪ್ರತಿಷ್ಠಿತ ಗೃಹಸ್ಥರೂ ವಿನಯ ವಂದನೆಗಳನ್ನು ಸಲ್ಲಿಸಿದರು. ಪ್ರತಿವಂದನೆ ನೀಡುತ್ತ ಸಾಹೇಬರು ಆಸನಾರೂಢರಾದರು. ಐದು ನಿಮಿಷಗಳ ವರೆಗೆ ಎಲ್ಲಲ್ಲೂ ಪ್ರಗಾಢ ಶಾಂತಿ!

ಪರೀಕ್ಷಕರು ತಮ್ಮ ಕಣ್ಣುಗಳನ್ನರಳಿಸಿ ಸುತ್ತಲೂ ಒಂದು ಬಾರಿ ನೋಡಿದರು. ಎಲ್ಲೆಡೆಗೆ ಶಿಸ್ತು ಸುವ್ಯವಸ್ಥೆಗಳು ಮೂರ್ತಿವೆತ್ತು ನಿಂತಿವೆ. ಹುಡಿಗೆಯರು ಸಾಲುಸಾಲಾಗಿ ಕುಳಿತು ತಮ್ಮನ್ನು ಪರೀಕ್ಷಿಸಲಿರುವ ಪರೀಕ್ಷನನ್ನು ಪರೀಕ್ಷಿಸುತ್ತಿದ್ದಾರೆ. "ಇವರು ಎಂತಹ ಪ್ರಶ್ನೆಗಳನ್ನು ಹಾಕಬಹುದು. ನಾವು ಲಾಗಹಾಕದಂತೆ ದೇವರೊಮ್ಮೆ ಕರುಣಿಸಿದರೆ ಸಾಕು" ದೇವರನ್ನು ಮೂಕಭಾವದಿಂದ ತಮ್ಮೊಳಗೇ ಪ್ರಾರ್ಥಿಸುತ್ತಿದ್ದಾರೆ. ಆಕಸ್ಮಾತ್ತಾಗಿ ಸಾಹೇಬರ ದೃಷ್ಟಿ ಗೌರಮ್ಮನನ್ನು ಕಂಡಿತು. ನೆಟ್ಟ ನೋಟದಿಂದೊಮ್ಮೆ ಗೌರಮ್ಮನನ್ನು ನೋಡಿದರು. ಆ ನೋಟದಲ್ಲಿ ಅದೆಂತಹ ಭಾವನೆಯಿದ್ದಿತು. ತಂದೆಯದೆ...ತಾಯ್ತನದ್ದೆ....ಅಣ್ಣನದೇ--? ಸಾಹೇಬರ ಈ ನೋಟವು ಗೌರಮ್ಮನ ಎದೆಯಲ್ಲಿ ಕಣ್ಣೀರನ್ನೆರಚಿದಂತಾಯ್ತು. ಅಧೀರ ನೇತ್ರೆಯಾದ ಅವಳು ಬೇರೆಡೆಗೆ ಮುಖತಿರುವಿದಳು.

ಪರೀಕ್ಷೆಗೊಮ್ಮೆ ಆರಂಭವಾಯ್ತು. ಕಠಿಣ ಪ್ರಶ್ನೆಗಳ ಮಳೆ ಸುರಿಯಲಾರಂಭ

ವಾಯ್ತು. ಗಡಚು ಪ್ರಶ್ನೆಗಳ ಗುಡುಗು! ಕೊಂಕು ಪ್ರಶ್ನೆಗಳ ಕೋಲ್ಮಿಂಚು!! ದೊಡ್ಡ ದೊಡ್ಡ ಹುಡುಗರೂ ತತ್ತರಿಸಬೇಕಾದ ಪ್ರಶ್ನೆಗಳಿವು. ಗೌರಮ್ಮನೊಮ್ಮೆ ನಡುಗಿದಳು. "ಇಂದೇನಾಗಿದೆ ಇಂತಹ ಪ್ರಶ್ನೆಗಳನ್ನೇಕೆ ಕೇಳುತ್ತಿದ್ದಾರೆ ಇವರು, ನನ್ನ ಭಾವೀ ಆಶಾಜ್ಯೋತಿಯು ಆರಿಹೋಯ್ತು" ಪರೀಕ್ಷೆಯೊಮ್ಮೆ ಮುಗಿದಂತಾಯ್ತು. ಸಂಜೆಯ ಆರು ಗಂಟೆಗೆ ತಮ್ಮನ್ನು ಕಾಣುವದಾಗಿ ಗೌರಮ್ಮನಿಗೆ ಆಜ್ಞೆಯಾಯ್ತು- ಬಿರುನೋಟದಿಂದ ಶಿಕ್ಷಕಿಯನ್ನು ನೋಡನೋಡುತ್ತ ಅವರು ಹೊರಟು ಹೋದರು.

ಸಾಯಂಕಾಲ ಆರಾಯ್ತು. ನಡನಡುಗುತ್ತಿರುವ ಗೌರಮ್ಮ, ಸಾಹೇಬರ ಬಿಡಾರಕ್ಕೆ ಬಂದಳು. ಬರುವ ಸಂಕಟಗಳೇನೋ ಎಂದು ಹೃದಯವು ಹೊಡೆದುಕೊಳ್ಳುತ್ತಿದ್ದಿತು. ಆರಾಮಕುರ್ಚಿಯ ಮೇಲೊರಗಿದ ಸಾಹೇಬರು ಗೌರಮ್ಮನ ಬರವನ್ನು ಇದಿರು ನೋಡುತ್ತಿದ್ದರು. ಗೌರಮ್ಮ ಬಂದಳು. ಸಾಹೇಬರಿಗೆ ವಂದನೆ ಸಲ್ಲಿಸಿ ಒಂದೆಡೆಗೆ ಮರ್ಯಾದೆಯಿಂದ ನಿಂತುಕೊಂಡಳು. ಸಾಹೇಬರೆಂದರು.

"ಸರಕಾರದವರು ನಿಮಗೆ ಸಂಬಳ ಕೊಟ್ಟು ಸೋಕಿ ಹೊಡೆಯುವದಕ್ಕಾಗಿ ನಿಯಮಿಸಿರುವದಿಲ್ಲ. ಇದು ನಿಮಗೆ ಗೊತ್ತಿದೆಯಲ್ಲವೇ" ಗೌರಮ್ಮ ಮೌನಿಯಾಗಿದ್ದಳು. ಸಾಹೇಬರೇ ಮತ್ತೆ ಮಾರ್ನುಡಿದರು "ಏಕೆ ಮೌನಮಂತ್ರ ಜಪಿಸುತ್ತಿದ್ದೀರಿ. ಹೀಗೆಲ್ಲಾ ಮಾಡುವದೆಂದರೆ ಏನೆಂದು ತಿಳಿದಿರುವಿರಿ. ಸರಕಾರದ ಸಂಬಳವನ್ನು ಪುಕ್ಕಟೆಯಾಗಿ ತಿಂದು ಕೊಬ್ಬಿದ ಗೂಳಿಯಂತೆ ಅಲೆದಾಡುವ ನಿಮ್ಮಂತಹ ಶಿಕ್ಷಕಿಯರಿಂದ ಏನೂ ಪ್ರಯೋಜನವಿಲ್ಲ. ಶಾಲೆಯನ್ನು ಸುಣ್ಣ ಬಣ್ಣಗಳಿಂದ ಸಿಂಗರಿಸಿ ಪರೀಕ್ಷಕರ ಕಣ್ಣಲ್ಲಿ ಮಣ್ಣೆರಚುವ ತಲೆ ನಿಮಗೆ ಚೆನ್ನಾಗಿ ಸಾಧಿಸಿದೆಯಲ್ಲವೇ. ಹೀಗೆ ಮಾಡುವದರಿಂದ ನಿಮಗೇ ಕೆಡುಕು ಇದು, ತಿಳಿದಿರಲಿ" ಗೌರಮ್ಮನನ್ನು ವಿಲಕ್ಷಣದೃಷ್ಟಿಯಿಂದ ನಿರೀಕ್ಷಿಸುತ್ತ ನುಡಿಯುತ್ತಿದ್ದರವರು. ಗೌರಮ್ಮನ ಎದೆ ಇನ್ನೂ ಬಲವಾಗಿ ಹೊಡೆದುಕೊಳ್ಳಹತ್ತಿತು. ತೋಳನ ಎದಿರು ನಿಂತ ಕುರಿಯಂತಾಗಿತ್ತು ಅವಳ ಬಾಳು. ನಡಗುವ ದನಿಯಿಂದ "ಇದೊಂದು ಬಾರಿ ಕ್ಷಮಿಸಿ" ಎಂದಳು. ಸಾಹೇಬರು ಕೆಲಹೊತ್ತು ಮೌನಿಗಳಾದರು. ನಂತರ ಹತ್ತಿರ ಕರೆದು ಕಿವಿಯಲ್ಲಿ ಏನನ್ನೋ ಹೇಳಿದರು. ಗೌರಮ್ಮನ ಮುಖವು ಕಪ್ಪಿಟ್ಟಿತು. ಕಂಬನಿಗರೆಯುತ್ತ "ಹೀಗೆಲ್ಲಾ ಹೇಳಬೇಡಿ" ಎಂದಳು. ಮತ್ತೊಂದು ಬಾರಿ ಆ ಉಗ್ರನೋಟವು ಅವಳ ಎದೆಯಲ್ಲಿ ನಾಟಿತು. "ಆಗದು ಆಗದು" ಎನ್ನುತ್ತಾ ಅವರ ಅಪ್ಪಣೆಯನ್ನು ಕೂಡಾ ನಿರೀಕ್ಷಿಸದೇ ಅವಳು ಮನೆಯ ಕಡೆಗೆ ಹೊರಟು ಹೋದಳು. ಸಾಹೇಬರು ಅಪಮಾನಿತರಾದರು. "ಇದರ ಸೇಡು ತೀರಿಸದೇ ಹೋದರೆ - - -" ಅವರ ಮಾತುಗಳೂ ಗಾಳಿಯಲ್ಲಿ ತೇಲಿ ಹೋದವು.

೦ ೦ ೦

ಎರಡು ವಾರಗಳು ಕಳೆದಿರಲಿಲ್ಲ.

ಸರಕಾರದವರು ಗೌರಮ್ಮನಿಗೆ ಈ ರೀತಿಯಾಗಿ ಆಜ್ಞೆಯೊಂದನ್ನು ಕೊಟ್ಟರು. ಪರೀಕ್ಷಕರು ನಿಮ್ಮ ಶಾಲೆಯನ್ನು ಪರೀಕ್ಷಿಸಿ ಈ ರೀತಿ ಬರೆದಿದ್ದಾರೆ "ಉಪಾಧ್ಯಾಯಿನಿಯು ಹುಡುಗೆಯರಿಗೆ ಶಿಕ್ಷಣ ಕೊಡದೇ ತನ್ನ ಚೈನಿ ಚೆಲ್ಲಾಟದಲ್ಲಿಯೇ ಯಾವತ್ತೂ ವೇಳೆಯನ್ನು ವ್ಯಯಿಸಿದ್ದಾಳೆ. ಹೀಗಾಗಿ ರಿಜಿಸ್ಟರ ಸಂಖ್ಯೆಯ $1/4$ ದಷ್ಟು ಹುಡಿಗೆಯರು ಕೂಡಾ ತೇರ್ಗಡೆಹೊಂದಿರುವದು ಕೇವಲ ವಿಷಾದದ ಮಾತು" ಇದರಿಂದ ಹೀಗೆ ತಿಳಿದು ಬರುತ್ತದಲ್ಲಾ. ನೀವು ಅನ್ಯಾಯವಾಗಿ ಸಂಬಳ ಪಡೆದು ಷೋಕಿ ಹೊಡೆಯುತ್ತಿರುವಿರೆಂದೂ ನಿಮ್ಮ ಈ ನಡತೆ ಒಳ್ಳೆಯದಲ್ಲವೆಂದೂ ನಿಮಗೆ "ಎಚ್ಚರ" ಕೊಡುತ್ತೇವೆ. ಇನ್ನು ಮೂರು ತಿಂಗಳಿಗೆ ನಿಮ್ಮ ಶಾಲೆಯ "ಸ್ಪೆಶಲ್ ಇನಸ್ಪೆಕ್ಷನ್" ಇಟ್ಟಿದೆ. ಅಷ್ಟರಲ್ಲಿ ನಿಮ್ಮ ಶಾಲೆಯ ಸ್ಥಿತಿಯನ್ನು ಸುಧಾರಿಸಿಕೊಳ್ಳಬೇಕಾಗಿ ಈ ಬರೆಹದ ಮೂಲಕ ನಿಮಗೆ "ವಾರ್ನಿಂಗ್" ಕೊಟ್ಟಿವೆ, ತಿಳಿಯುವದು

ಗೌರಮ್ಮನ ಎದೆಯೊಡೆದು ನೀರಾಯ್ತು. ಒಳ್ಳೇಯವರ ದಿನಗಳಲ್ಲ ಇವು ಎಂದುಕೊಂಡು ಮತ್ತೆ ತನ್ನ ಕೆಲಸದಲ್ಲಿ ಮಗ್ನಳಾದಳು.

– ೩ –

ಮುಗಿಲಲ್ಲಿ ಮೋಡಗಳು ಬಳಿಸಿ ನಿಂತಿವೆ. ಎತ್ತಲೂ ಕತ್ತಲು ಕಾರುವ ಕರಿ ಮೋಡಗಳು ಆಗಸದಲ್ಲಿ ರುದ್ರನೃತ್ಯ ಮಾಡುತ್ತ ಗುಡುಗುತ್ತಲಿವೆ. ಆ ಭೀಕರ ಗಭೀರತೆಯಲ್ಲಿ ವಿಕಟ ಹಾಸ್ಯದಿಂದ ನಗುತ್ತಿರುವಂತೆ ಕೋಲ್ಮಿಂಚೊಮ್ಮೆ ಕಾಣಿಸಿಕೊಳ್ಳುತ್ತಿದೆ. ಎತ್ತ ನೋಡಿದತ್ತ ಕತ್ತಲು-ಕತ್ತಲು. ಕತ್ತಲು ಕವಿದಿದೆ. ಬೆಳಕಿನ ಒಂದಂಶವೂ ಕೂಡಾ ಕಾಣಿಸದು. ಗೌರಮ್ಮ ಹಳ್ಳಿಯ ಬೀದಿಯೊಂದರಲ್ಲಿ ಹೊರಟಿದ್ದಾಳೆ. ಆ ಕಾಳಿಮದಲ್ಲಿ ಜಪ ಜಪ ಹೆಜ್ಜೆಗಳನ್ನು ಹಾಕುತ್ತ ಹೊರಟ ಗೌರಮ್ಮನ ಪಾದರವವು ಆ ಭೀಕರ ರಾತ್ರಿಯಲ್ಲಿ ಚಿರ್ರೆನ್ನುವ ಚಿಮ್ಮಂಡಿಗಳ ಸ್ವರದೊಂದಿಗೆ ಏಕತಾನವಾಗಿದೆ. ಗೌರಮ್ಮನ ತಲೆಯಲ್ಲಿ ಗಹನ ವಿಚಾರಗಳ ಕಾರ್ಮೋಡಗಳು ಸುತ್ತಿಕೊಂಡಿವೆ. ಹೃದಯದಲ್ಲಿ ಸಾಸಿರಾರು ವಿಚಾರಗಳು ಗುದುಮುರಿಗೆ ಹಾಕುತ್ತಿವೆ. ಅವಳೀಗ ನಡೆದುದು ಸಾಹೇಬರ ಬಿಡಾರದತ್ತ. ಊರ ಹೊರಗಿನ ಧರ್ಮಶಾಲೆಯಲ್ಲಿ ಸಾಹೇಬರು ಕ್ಯಾಂಪ್ ಹಾಕಿದ್ದಾರೆ.

ಈ ದಿನ ಗೌರಮ್ಮನ ಶಾಲೆಯ ಸ್ಪೆಶಲ್ ಇನ್ಸಸ್ಪೆಕ್ಷನ್ನೂ ನಡೆದು ಹೋಯ್ತು. ಈ ದಿನದ ಅವರ ರಿಮಾರ್ಕಿನಿಂದ ಅವಳ ಉದ್ಯೋಗವು ಬಾಳುವದೂ-ನಂದುವದೂ ನಿಶ್ಚಯಿಸಲ್ಪಡಲಿದೆ. ಹಿಂದೊಮ್ಮೆ ಕಾಣಹೇಳಿದಂತೆ ಈ ದಿನವೂ ಅವರಿಂದ ಆಜ್ಞೆ. ಅದಕ್ಕಂತೇ ಇಂತಹ ಭೀಕರ ರಾತ್ರಿಯಲ್ಲಿ ಅವಳು ಸಾಹೇಬರ ಬಿಡಾರದತ್ತ ನಡೆದಿದ್ದಾಳೆ.

ಹೊಗೆಯನ್ನುಗುಳುವ ಬಿಳಿ ಬತ್ತಿಯನ್ನು ಕೈಯಲ್ಲಿ ಹಿಡಿದು ಸಾಹೇಬರು ವಿಚಾರ ಮಗ್ನರಾಗಿದ್ದರು. ಮಧ್ಯೆ ಮಧ್ಯೆ ಬತ್ತಿಯನ್ನು ಸೇದುತ್ತ ವರ್ತುಲ ವರ್ತುಲವಾಗಿ ಹೊರಡುವ ಹೊಗೆಯಲ್ಲಿ ತಮ್ಮ ವಿಚಾರ ಮಾಲಿಕೆಯನ್ನು ತಿರುಗಿಸುತ್ತಿದ್ದರು. ಸಾಹೇಬರು ಅವರೊಬ್ಬ ಸ್ತ್ರೀಲೋಲರಾದ ಕಾಮಜೀವಿಗಳು. ಅವರನ್ನು ಪರೀಕ್ಷಿತರನ್ನಾಗಿ ಆರಿಸಿದುದು ಶಿಕ್ಷಕೆಯರ ದುರ್ದೈವವೇ ಸರಿ! ಪರೀಕ್ಷಕರನ್ನು ತನು-ಮನದಿಂದ ಗೌರವಿಸಿದ ಅದೆಷ್ಟೋ ಉಪಾಧ್ಯಾಯಿನಿಯರು ಈಗಾಗಲೇ ಎರಡೇ ವರ್ಷದ ಕಾಲೇಜ ಸರ್ಟಿಫಿಕೇಟ ಪಡೆದಿದ್ದಾರೆ.

ಸಾಹೇಬರು ಶಿಕ್ಷಿಕೆಯ ಬರವನ್ನೇ ಇದಿರುನೋಡುತ್ತಿದ್ದರು. “ಇಂತಹ ಅದೆಷ್ಟೋ ಹೆಣ್ಣುಗಳ ಕಣ್ಣಲ್ಲಿ ಮಣ್ಣು ಹಾಕಿದವನಿಗೆ ಈಕೆ ಮೂಗುತಿಕ್ಕಿಸುತ್ತಿದ್ದಾಳೆ. ಆಗಲಿ ಅದೆಷ್ಟು ದಿನಗಳವರೆಗೆ ಈ ಹೆಮ್ಮೆ ನಿಲ್ಲುವದೋ ನೋಡುವೆ. ಆ ದಿನ ಗರ್ವದಿಂದ ನಡೆದು ಹೋದ ಹರಿಣಿ ಈ ದಿನ ಬಲೆಯಲ್ಲಿ ಬೀಳುತ್ತಿದೆ. ನೋಡುವ ಅದರ ಚಪಲತೆ ಎಷ್ಟಿದೆ”

ಗೌರಮ್ಮ ಬಂದಳು. ಹಿಂದಿನಂತೆ ವಂದನೆ ಹೇಳುತ್ತ ಒಂದೆಡೆ ಮರ್ಯಾದೆಯಿಂದ ನಿಂತುಕೊಂಡಳು. ಸಾಹೇಬರು ಇಲ್ಲದ ಹುಸಿನಗು ನಗುತ್ತ ಕೇಳಿದರು. “ಇದೆಷ್ಟು ಸಂಕೋಚ ಗೌರು. ಇತ್ತ ಫರ್ನಿಚರ ಇದೆ. ಕುಳಿತುಕೊಳ್ಳಬಾರದೇ”

ತಮ್ಮ ಸರಿ ಕುಳಿತು ಕೊಳ್ಳುವದೇ ನಾವು ಸಾರ್! ತಂದೆಯಂತಹರು ತಾವು. ಮಕ್ಕಳು ನಾವು, ಮರ್ಯಾದೆಕೊಡಬೇಕಲ್ಲವೇ?”

ತಂದೆಯೆಂಬ ಸಂಬೋಧನದಿಂದ ಸಾಹೇಬರ ಹೃದಯಕ್ಕೆ ಹುಳುಕಡಿದಂತಾಯಿತು. ಮಾತು ಮಾತಿನಲ್ಲಿಯೇ ತನ್ನನ್ನು ಅಧೀರನನ್ನಾಗಿ ಮಾಡಬಲ್ಲ ಅವಳ ವಾಕ್ಚತುರ್ಯಕ್ಕೆ ಅವರು ಬೆಪ್ಪಾದರು ಆದರೂ—

“ಗೌರು! ನೀನಿಲ್ಲಿ ಕುಳಿತುಕೊಳ್ಳಲೇ ಬೇಕು. ಈ ದಿನ ನಿನ್ನಲ್ಲಿ ಮಹತ್ತರವಾದ ಯೋಚನೆಯಿದೆ. ನಿನ್ನ ಭಾವೀ ಜೀವನದ ಸುಖ-ದುಃಖಗಳ ಪರೀಕ್ಷೆಯಿದೆಯೆಂದು”

“ಅದನ್ನೆಲ್ಲಾ ನಾನು ಬಲ್ಲೆ ಸಾರ್-ಅದಕ್ಕಾಗಿ ದೀನೆಯಾಗಿ ನಿಮ್ಮ ಪಾದತಲದಲ್ಲಿ ಭಿಕ್ಷೆ ಬೇಡುತ್ತಿದ್ದೇನೆ. ನನಗೆ ಅನ್ನದಾನ ಮಾಡುವದು ನಿಮ್ಮ ಕೈಯಲ್ಲಿದೆ.”

“ಅದು ನಿಜ! ಗೌರು. ಹುಡಿಗಿಯರಿಗೆ ಶಿಕ್ಷಣ ಕೊಡದೇ ಅವರನ್ನು ಹಾಗೇ ಅಲಿಯು ಹಚ್ಚುವದೇ?”

“ತಾವು ಕೋಪಿಸುವುದಿಲ್ಲವೆಂದರೆ ನಾನೊಂದು ಮಾತು ಕೇಳುವೆ”

“ಕೋಪವೇನು ಬಂತು ಹೇಳು”

“ತಾವು ಕೇಳುವ ಪ್ರಶ್ನೆಗಳು ಚಿಕ್ಕ ಬಾಲಿಕೆಯರವೇ ಸಾರ್”

ಮೌನಿಗಳಾಗಿದ್ದರು ಸಾಹೇಬರು ಆಗ. “ತಾನು ಕೇಳುವ ಅಂತಹ ಕಠಿಣ ಪ್ರಶ್ನೆಗಳನ್ನು ವತ್ತಿನ್ನಾರು ಕೇಳಬೇಕು. ಜಗತ್ತಿನಲ್ಲಿ ಎಷ್ಟೋ ಸುಂದರ “ಹೂ”ಗಳು ಅರಳುತ್ತಿವೆ. ಅರಸಿಕನಾದವನಿಗೆ ಅದರಿಂದ ಏನು ಪ್ರಯೋಜನ! ಆದರೆ ನಾನು ರಸಿಕ ಜೀವಿ. ಇಂತಹ ಅರಳಿದ ಅಲರುಗಳನ್ನೊಮ್ಮೆ ಕೈಲಿ ಹಿಡಿದು ಮೂಸಿನೋಡದೇ ಮುಂದುವರಿಯಲಾರೆ. ಆ ಆಸೆ ಫಲಿಸಬೇಕಾದರೆ ಸುತ್ತಲೂ ಹಬ್ಬಿ ಹಬ್ಬಿ ನಿಂತಿರುವ ಕಂಟಕಗಳನ್ನೆಲ್ಲ ಕಡಿದು ಚೆಲ್ಲಿದರೇನೇ “ಹೂ” ಕೈಗೆ ಸಿಕ್ಕಬಹುದು. ಅದಕ್ಕಾಗಿ-ಈ ಹೂವಿಗಾಗಿ-ಇದರ ಸೌರಭಕ್ಕಾಗಿ ಹುಡಿಗೆಯರಿಗೆ ನಾನು ಕೇಳಿದ ಪ್ರಶ್ನೆಗಳು ಕಟುತರವಾಗಿರಲೇ ಬೇಕು” ಕೆಲವೇಳೆ ಇಬ್ಬರೂ ಮೌನಿಗಳಾಗಿದ್ದರು. ಆ ನಿಶ್ಶಬ್ದತೆಯನ್ನು ಮುರಿದು ಸಾಹೇಬರೇ ಮಾತನಾಡಿದರು

“ಗೌರು! ಈ ದಿನ ನಿನ್ನನ್ನು ಸ್ಪಷ್ಟವಾದ ಮಾತುಗಳಿಂದ ಕೇಳುತ್ತಿದ್ದೇನೆ ಅಂದಿನ ಪ್ರಶ್ನೆಯೇ ಈ ದಿನವೂ ನಿನ್ನ ಮೇಲಿದೆ. ಹೇಳು ಒಂದು ಬಾರಿ ಸ್ಪಷ್ಟವಾದ ಮಾತುಗಳಿಂದ ಹೇಳುವದೆಲ್ಲವನ್ನೂ ಹೇಳಿಬಿಡು. ಗೌರು “ಅವಿವೇಕಿಯಾಗಿ ಹೆಮ್ಮೆಯಿಂದ ನನ್ನ ಮನಸ್ಸಿನ ವಿರುದ್ಧವಾಗಿ ಮಾತನಾಡಿಯೇ ಹೋಕೆ! ನನ್ನ ಆಸೆಯ ಉಸಿರಾಗಿ ನಡೆದುದಾದರೆ ನಿನ್ನ ಸೌಭಾಗ್ಯಕ್ಕೆಣೆಯೇ. ನನ್ನ ಮಾತಿನಂತೆ ನಡೆದುದಾದರೆ ನೀನು ನನ್ನವಳಾದರೆ ಎರಡೇ ವರ್ಷಗಳಲ್ಲಿ ನೀನೋರ್ವಳು ಗೌರವಪೂರ್ಣ ಉಪಾಧ್ಯಾಯಿನಿಯಾಗುವೆ. ಅದಿಲ್ಲವಾದರೆ ನಾಳೆಯೇ ಹೊಟ್ಟೆಬಟ್ಟೆಗೆ ಗತಿಯಿಲ್ಲದ ಬೀದಿಯ ಭಿಕಾರಿಣಿಯಾಗುವೆ, ಯೋಚಿಸು! ಯಾವುದಕ್ಕೂ ಉತ್ತರ ದೊರೆಯಲಿ.”

ಗೌರಮ್ಮನ ಹೃದಯದಲ್ಲಿ ಸಾಸಿರಾರು ಯೋಚನೆಗಳ ತುಮುಲ ತಾಂಡವ ಯುದ್ಧ. ‘ಏನು ನಾನು ಮಾನಚ್ಯುತಳಾಗಲೇ. ಹುಡಿಗೆಯರನ್ನು ಸತ್‌ಶೀಲೆಯರನ್ನಾಗಿ ಮಾಡಹೊರಟ ಪವಿತ್ರ ಕಾರ್ಯ ಸ್ವೀಕಾರ ಮಾಡಿದ ನಾನೇ ಹುಡಿಗೆಯರ ಗುರುವೇ. ಅನ್ಯಾಯ ಮಾಡಲೇ! ಇಂತಹ ಹೇಸಿ ಕಾರ್ಯಕ್ಕೆ ಮನ ಹಾಕಲೇ? ಛೀ ಸರ್ವಥಾ ನನ್ನಿಂದಾಗದ ಮಾತಿದು” ಮನಸ್ಸಂಕಲ್ಪ ಮಾಡುತ್ತಿರುವಾಗಲೇ ಭೀಕರವಾದ ಭವಿಷ್ಯದ ದಿನಗಳು ಎದಿರು ನಿಂತು ಸಹಿಸಲಸಾಧ್ಯವಾದ- ಕೇಳವಂತಹ ಕಟುವಚನಗಳ ಜ್ವಾಲೆಯನ್ನು ಉಗುಳುತ್ತಿವೆ.

“ಗೌರು ನಿನ್ನ ಹೊಟ್ಟೆಯ ಪಾಡೇನು. ಸಾಹೇಬರ ವಿರುದ್ಧವಾಗಿ ಮಾತನಾಡಿದುದಾದರೆ ನಾಳೆಗೇ ನಿನಗೆ ಶಾಶ್ವತ ರಜೆಯನ್ನು ದಯಪಾಲಿಸುವರು. ಅನಂತರ ಹೊಟ್ಟೆಯ ಆಧಾರವೇನು ಏನು? ಭಿಕ್ಷೆ ಎತ್ತಲು ಹೊರಡುವಿಯಾ! ಯಾರು ನೀಡುವರು ನಿನಗೆ ಭಿಕ್ಷೆ. ದುಡಿಯ ಹೋಗುವಿಯಾ! ನಿನ್ನಿಂದ ಸಾಧ್ಯವಿಲ್ಲ. ಮತ್ತೆ ಈ ಹೀನತಮ ಕಾರ್ಯ ಈಗಲೇ ಆದುದಾದರೆ ಕೆಡುಕೇನು ಬಂತು! ಪಾಪವು ನಿನ್ನದಲ್ಲ. ಇಂತಹ ಸಂಕಷ್ಟದಲ್ಲಿ ಸಿಲುಕಿಸಿ ತನ್ನ ವಾಸನಾ ತೃಪ್ತಿಯನ್ನು ಮಾಡಿಕೊಳ್ಳುವ ಆ ಪರೀಕ್ಷಕನದು. ಅಪರಾಧವೆಲ್ಲವೂ ಅವನದೇ. ಪರಮೇಶ್ವರನ ನ್ಯಾಯಸ್ಥಾನದಲ್ಲಿ ಅವನೇ ತಪ್ಪಿತನು.”

ಹೃದಯಸ್ಥಂಬನವಾಗುವಂತೆ ತಿರುಗುತ್ತಲಿವೆ ವಿಚಾರಗಳು ಒಂದೇ ಸವನೇ. ಯಾವುದಕ್ಕೂ ಅವಳಿಂದ ನಿಶ್ಚಿತ ಉತ್ತರವು ದೊರೆಯದಂತಾಗಿದೆ.

ಖಡ್. ಖಡ್. ಖಡ್. ಖಾಡ್. ಡ. ಡ. ಡ.

ಭೀಕರ ಸ್ವರಮಾಡುತ್ತ ಮನಸ್ವೀ ಗುಡುಗುಡುತ್ತ ಶಿಡಿಲೊಂದು ಬಿತ್ತು ಕೋಲ್ಮಿಂಚೊಮ್ಮೆ ಕಣ್ಚಿವುಟ ನೋಡಿತು. ರಫ್. ರಫ್. ರಫ್. ಮಳೆಯಬ್ಬರವೂ ಹೆಚ್ಚಾಯ್ತು. ಸಾಹೇಬರ ಕೊಟಡಿಯಲ್ಲಿ ಅದೇನೋ ಪಿಸುಮಾತುಗಳು. ಭೀಕರವಾದ ಕಾರ್ಗತ್ತಲೆಯಲ್ಲಿ ಅಲ್ಲಿರುವವರು ಕಾಣುವ ಬಗೆಯಾದರೂ ಎಂದು. ಅದೋ. ಛರ್! ಕೋಮ್ಮಿಂಚು ಬೆಳಕನ್ನು ನೀಡಿದೆ ನಿರೀಕ್ಷಿಸು. ಅಮಮಾ ಇದೆಂತಹ ದೃಶ್ಯ: ಸಾಹೇಬರ ಮುಖವಲ್ಲವೇ ಅದು? ನಿಜ! ಗೌರಮ್ಮನ ಕೆನ್ನೆಯಮೇಲೆ: ಛೀ. ಪಾಪ. ಆ ಬಡವೆಯ ಗುಟ್ಟು ರಟ್ಟುವಮಾಡ್ಬೇಡಿ. ಸುಮ್ಮನಾಗಿರಿ. ನೀವು ಹಾಗೆಲ್ಲಾ ಸಿಕ್ಕ ಹಾಗೆ ಗಳುಹಬಾರದು ಆ ಬಡವಿಯ ವಿಷಯವಾಗಿ ಎಚ್ಚರಿಕೆ!

---



# ಸಮರಭೂಮಿಯ ಸಮಾಚಾರಗಳು



**ತಾ. ೮ ಜೂನ್, ೧೯೪೦**

ಜರ್ಮನರ ಕೆಲವು ಟ್ಯಾಂಕುಗಳು ಫ್ರೆಂಚರ ಕೆಲವು ರಕ್ಷಣಾ ಸಾಲುಗಳನ್ನು ಭೇದಿಸಿಕೊಂಡು ಮುನ್ನುಗ್ಗಿವೆ. ಸಮುದ್ರ ಮಾರ್ಗದಿಂದ ಬ್ರಿಟಿಷರು ಬಂದು ನೆರವನ್ನೀಯದಂತೆ ತಡೆಗಟ್ಟುವುದಕ್ಕಾಗಿ ಜರ್ಮನರು ಈ ದಿನ ಹೊಸತೊಂದು ಧಾಳಿಯನ್ನು ಆರಂಭಿಸಿದ್ದಾರೆ.

**ತಾ. ೯ ಜೂನ್, ೧೯೪೦**

ಇಟಾಲಿಯ ಕೌಂಟ್ ಸಿಯಾನೋರವರ ಪತ್ರಿಕೆಯ ಸಂಪಾದಕರು ಭಾಷಣಮಾಡುತ್ತಾ 'ಫ್ರಾನ್ಸ್ ಜರ್ಮನರ ಎದುರು ಬಹು ಕಾಲ ಬದುಕಲಾರದು. ಫ್ರಾನ್ಸು ನಾಶವಾದ ಮೇಲೆ ಹಿಟ್ಲರರು ಇಂಗ್ಲೆಂಡಿನ ಮೇಲೆ ದಂಡಯಾತ್ರೆಗೈಯ್ಯುತ್ತಾರೆ. ಆಗ ಇಟಲಿಯು ಕೂಡ ಜರ್ಮನಿಯೊಡನೆ ಸೇರಿ ಪ್ರಪಂಚವನ್ನು ಬ್ರಿಟಿಷರ ಕ್ರೌರ್ಯದಿಂದ ವಿಮೋಚನಗೊಳಿಸಲು ಕಾದಾಡುವೆವು.' ಎಂದರು.

ಫ್ರಾನ್ಸಿನಲ್ಲಿ ೨೦ ಲಕ್ಷಕ್ಕೂ ಮಿಕ್ಕಿದ ಜರ್ಮನ್ ಯೋಧರು ಜಯಶೀಲರಾಗುತ್ತ ಮುನ್ನುಗ್ಗುತ್ತಿದ್ದಾರೆ. ಜರ್ಮನ್ ವಿಮಾನಗಳೂ ಪ್ರಾಮುಖ್ಯ ಸ್ಥಾನಗಳ ಮೇಲೆ ಹಾರಾಡಿ ಬಹಳ ನಷ್ಟಪಡಿಸಿವೆ. ಮಿತ್ರರಾಷ್ಟ್ರಗಳ ೫೦ ವಿಮಾನಗಳು ನಾಶವಾಗಿವೆ. ಒಂದು ಬೆಲೂನು ಕೂಡ ನಾಶವಾಗಿದೆ ಎಂದು ಜರ್ಮನ್ ವಾರ್ತೆ.

ಬ್ರಿಟಿಷ್ ಸಾರ್ವಭೌಮರ ವಿಮಾನದಳದವರು ಜರ್ಮನಿಯ ಮೇಲೂ ಉತ್ತರ ಫ್ರಾನ್ಸಿನ ಜರ್ಮನಿಯ ರಣಭೂಮಿಗಳ ಮೇಲೂ ಹಾವಳಿ ಮಾಡಿ ನಷ್ಟಪಡಿಸಿದ್ದಾರೆ. ೨ ವಿಮಾನಗಳು ಮಾತ್ರ ಹಿಂತಿರುಗಿಲ್ಲ.

ಬ್ರಿಟಿಷ್ ಏರ್‌ಕ್ರೇಫ್ಟ್ ಕ್ಯಾರಿಯರ್ ಹಡಗಾದ ಗ್ಲೋರಿಯಸ್ ಎಂಬುದನ್ನು ಈ ದಿನ ಜರ್ಮನರು ಮುಳುಗಿಸಿದರು. ೨೦ ಸಾವಿರ ಟನ್ನು ತೂಕದ ಟ್ರಾನ್ಸ್‌ಪೋರ್ಟ್ ಹಡಗಾದ ಒರಾಮಾ ಎಂಬುದೂ ಮುಳುಗಿಸಲ್ಪಟ್ಟಿದೆ. ಅಲ್ಲದೆ ಎರಡು ಡಿಸ್ಟ್ರಾಯರು ಹಡಗುಗಳನ್ನೂ ಒಂದು ಟೇಂಕರ್ ಹಡಗನ್ನೂ ಜರ್ಮನರು ಮುಳುಗಿಸಿದ್ದಾರೆ.

**ತಾ. ೧೦ ಜೂನ್, ೧೯೪೦**

ಈ ದಿವಸ ಇಟಾಲಿಯು ಮಿತ್ರ ರಾಷ್ಟ್ರಗಳ ಮೇಲೆ ಯುದ್ಧ ಘೋಷಿಸಿದೆ. ಇಟಲಿಯ ಸೈನಿಕರು ಫ್ರಾನ್ಸಿಗೆ ನುಗ್ಗುತ್ತಿದ್ದಾರೆ. ಫ್ರೆಂಚ್ ರಿವ್ಹೀರಾ ಪ್ರದೇಶವನ್ನು ಆಕ್ರಮಿಸಿಕೊಂಡರೆಂದು ಗೊತ್ತಾಗಿದೆ. ಈ ಸಂದರ್ಭದಲ್ಲಿ-ಅಸಂಖ್ಯಾತ ಜನರ ಮುಂದೆ ಸಿನಾರ್ ಮುಸಲನಿಗಳು ಮಾತನಾಡುತ್ತಾ ಹೀಗೆ ನುಡಿದರು:-'ನಾವು ಬಂಡವಾಳ ಗಾರಿಕೆಯ ಮತ್ತು ಪ್ರಗತಿನಿರೋಧಕವಾದ ರಾಷ್ಟ್ರದ ಮೇಲೆ ಸಮರೋದ್ಘೋಷಣವನ್ನು ಮಾಡಿದ್ದೇವೆ. ಮೋಸ-ಬೆದರಿಕೆ-ಜನಾಂಗ ಸಂಘದ ಕಾಪಟ್ಯಗಳೇ ಈ ರಾಷ್ಟ್ರಗಳ ಜೀವಾಳ. ನಮಗೆ ಸಾಮುದ್ರಾಧಿಪತ್ಯದಲ್ಲಿ ಸಮಾನ ಭಾಗ ಬೇಕು. ನಮ್ಮ ಹಕ್ಕಿಗಾಗಿ ನಾವು ಕತ್ತಿಯೆತ್ತಿದ್ದೇವೆ. ನಮಗೆ ಯಾವ ರಾಷ್ಟ್ರವನ್ನೂ ಆಕ್ರಮಿಸಬೇಕೆಂದಿಲ್ಲ. ಈ ಸಂದರ್ಭದಲ್ಲಿ ನಾವು ಇಟಾಲಿಯ ಸಾರ್ವಭೌಮರಿಗೆ ರಾಜಭಕ್ತಿಯನ್ನು ತೋರೋಣ! ನಮ್ಮ ಮಿತ್ರರಾಷ್ಟ್ರವಾದ ಜರ್ಮನಿಗೆ ವಂದನೆಯನ್ನು ಸಲಿಸೋಣ. ನಾವು ಜಗತ್ತನ್ನೇ ಜಯಿಸಬಲ್ಲೆವು!' ಮುಸಲನಿಗಳ ಭಾಷಣವಾದ ಕೂಡಲೇ ರೇಡಿಯೋ ಟೀಕಾಕಾರರು 'ಇದನ್ನು ೮ ಕೋಟಿ ಜರ್ಮನ್ನರು ಕೇಳುತ್ತಿದ್ದಾರೆ. ನಾವೀಗ ೧೫ ಕೋಟಿ ಸಂಖ್ಯಾಕರಾದ ಜನಾಂಗರಾದೆವು!' ಎಂದು ಘೋಷಿಸಿದರು. ಮುಸಲನಿಗಳ ತೀರ್ಮಾನವನ್ನು ಕೇಳಿ ಬ್ರಿಟಿಷ್ ವಿದೇಶಾಂಗ ಮಂತ್ರಿ

'ಉದ್ಧಾರಕರ್ತರಾದ ಫ್ರೆಂಚರನ್ನೆ
ಸಿ ಇಟಲಿ ಮೋಸಮಾಡಿತು'
ರು. ಈ ಸಂದರ್ಭದಲ್ಲಿಯೆ ನಾರ್ವೆ
ಅರಸರು ಯುದ್ಧ ನಿಲ್ಲಿಸಿದ್ದಾರೆ.
ದ್ಧ ಮಿತ್ರರಾಷ್ಟ್ರಗಳ ಸೈನಿಕರನ್ನೆಲ್ಲ
ವಾಸು ಕರೆಸಲಾಗಿದೆ. ನಾರ್ವೆ ಅರ
ಲಂಡನಿಗೆ ಬಂದಿದ್ದಾರೆ.

ಫ್ರೆಂಚ್ ಫೈಟರ್‌ಗಳು ಜರ್ಮನರ ವಿಮಾನಗಳನ್ನು ನಾಶಪಡಿಸಿವೆ.

**೧೧ ಜೂನ್, ೧೯೪೦**

ಅಲ್‌ಜೇರಿಕಾ, ನಂಬೋಲಿಯಾ, ...ನೋಲಿ, ಗೆರಾವೆಂ, ಟಮಾವೋ, ...ಬೀ ಐದು ಇಟಾಲಿಯನ್ ಜಹಜು ... ಶತ್ರುಗಳ ವಶವಾಗಬಾರದೆಂದು ...ವೇ ಆತ್ಮನಾಶನವನ್ನು ಮಾಡಿಕೊಂ...ವು. ಅಲ್ಲದೆ ಸಿಸ್ಸಿಯಾನಾ ...ಮೋ, ...ರಡು ನಾವೆಗಳನ್ನು ಮಿತ್ರರಾಷ್ಟ್ರ... ಹಿಡಿದಿವೆ. ಜಿಬ್ರಾಲ್ಟರಿನಲ್ಲಿದ್ದ ...ು ಹಡಗುಗಳು ಆತ್ಮನಾಶನ ಪ್ರಸಂ...ವಲ್ಲಿದ್ದಾಗ ಬ್ರಿಟಿಷರಿಂದ ತಡೆಯಲ್ಪ...ವೆ.

ಫ್ರಾನ್ಸು ಪ್ಯಾರಿಸನ್ನು ತ್ಯಜಿಸಿ ...ರೆ ಕಡೆಗೆ ರಾಜಧಾನಿಯನ್ನೊಯಿ...ದೆ.

ಆಫ್ರಿಕಾ ಖಂಡದಲ್ಲಿರುವ ಇಟಾಲಿ...ಯನ್ ವಸಾಹತುಗಳಲ್ಲಿ ಬ್ರಿಟಿಷ್ ...ಮಾನಗಳು ಧಾಳಿ ನಡೆಯಿಸಿದುವು. ...ರಡು ವಿಮಾನಗಳು ಹಿಂತಿರುಗಿಲ್ಲ.

ಮಾಲ್ಟದ ಮೇಲೆ ಇಟಲಿಯ ...ಮಾನ ಧಾಳಿಯಾಯಿತು. ಇಟಾ...ಯ ಮೂರು ವಿಮಾನಗಳು ನಾಶ...ಗೊಳಿಸಲ್ಪಟ್ಟವೆ. ಹಲವು ಸಾವು ...ನೋವುಗಳಾಗಿವೆ.

**ತಾ. ೧೨ ಜೂನ್, ೧೯೪೦**

ಬ್ರಿಟಿಷ್ ಸೋಮಾಲಿಲೆಂಡಿನ ...ಳಗೆ ಇಟಾಲಿ ಸೈನ್ಯಗಳು ನುಗ್ಗಿವೆ ...ನೆಂದು ಸುದ್ದಿ.

ಕೋನೋವೋ ಎಂಬ ಇಟಾಲಿ ಹಡಗು ಆತ್ಮನಾಶನಮಾಡಿಕೊಂಡಿದೆ.

**ತಾ. ೧೩ ಜೂನ್, ೧೯೪೦**

ಪ್ಯಾರಿಸನ್ನು ಜರ್ಮನರು ವಶಪಡಿಸಿಕೊಂಡರು.

ಬ್ರಿಟಿಷ್ ದಳವೊಂದು ಜರ್ಮನರಿಂದ ಸುತ್ತುವರಿಯಲ್ಪಟ್ಟ ಕಾರಣ ೬೦೦೦ ಬ್ರಿಟಿಷ್ ಸಿಪಾಹಿಗಳು ಜರ್ಮನರ ಕೈಸೆರೆಯಾದರು!

ಏಡನ್ನಿನ ಮೇಲೆ ಇಟಲಿಯ ವಿಮಾನಧಾಳಿ ನಡೆಯಿಸಿತು. ೫ ಜನರು ಸತ್ತರು. ಇಟಲಿಯ ಒಂದು ವಿಮಾನ ನಾಶವಾಗಿದೆ ಮಾಲ್ಟಾದಲ್ಲಿ ಪುನಃ ವಿಮಾನ ಧಾಳಿಯಾಗಿ ೩೦ ಜನ ಸತ್ತರು. ಹಲವು ಗಾಯಗಳಾಗಿದೆ.

ಈಜಿಪ್ಟ ಸರಹದ್ದಿನಲ್ಲಿ ಇಟಲಿ ಸೈನಿಕರಿಗೂ ಬ್ರಿಟಿಷ್ ಸೈನಿಕರಿಗೂ ಘರ್ಷಣವುಂಟಾಗಿ ೬೩ ಜನ ಇಟಾಲಿ ಸಿಪಾಹಿಗಳು ಬ್ರಿಟಿಷರ ಸೆರೆಯಾದರು.

ಇಟಲಿಯ ಒಂದು ಪೈನ್ ಸ್ವೀಪರು ಹಡಗು ಮುಳುಗಿತು. ಇಟಾಲಿಯನ್ ಆಫ್ರಿಕಾದ ಮೇಲೆ ಬ್ರಿಟಿಷ್ ವಿಮಾನ ಧಾಳಿನಡೆದು ೧೦ ಜನರು ಸತ್ತರು.

**ತಾ. ೧೪ ಜೂನ್, ೧೯೪೦**

ಮಾಲ್ಟದ ಮೇಲೆ ಪುನಃ ಧಾಳಿಯಾಗಿದೆ. ಇಬ್ಬರು ಬ್ರಿಟಿಸ್ ಸಿಪಾಯಿಗಳು ಮಡಿದಿರುವರು.

ಈ ದಿವಸ ಸ್ಪೈನಿನ ಸೈನಿಕರು ಉತ್ತರ ಆಫ್ರಿಕಾದಲ್ಲಿರುವ ಅಂತರ ರಾಷ್ಟ್ರೀಯ ಪ್ರದೇಶವಾದ ಟ್ಯಾಂಜಯರ್‌ನ್ನು ಆಕ್ರಮಿಸಿಕೊಂಡಿದ್ದಾರೆ.

ಡಚ್ ಹಡಗೊಂದನ್ನು ಇಟಾಲಿಯವರು ಮುಳುಗಿಸಿದ್ದಾರೆ. ೪ ಜನ ಸತ್ತರು.

ಟರ್ಕಿಯು ಸದ್ಯಕ್ಕೆ ಯುದ್ಧಕ್ಕೆ ಸೇರುವುದಿಲ್ಲವೆಂದುಗೊತ್ತಾಗಿದೆ. ಸದ್ಯ ಅದು ಜರ್ಮನಿಯೊಡನೆ ವ್ಯಾಪಾರ ಸಂಧಿಮಾಡುತ್ತಿದೆ.

"ಸ್ಕಾಟ್ ಸೂನ್" ಎಂಬ ಬ್ರಿಟಿಷ್ ಹಡಗು ಜರ್ಮನರಿಂದ ಮುಳುಗಿಸಲ್ಪಟ್ಟಿದೆ. ೧೦ ಜನರ ಪತ್ತೆಯಿಲ್ಲ.

# "ಗೆಳೆಯರ  ತಂಡ"

ಸ್ಥಾಪನೆ: ೧೯೩೮

ನಂ ೮೯

ಸದಸ್ಯರು ೨೬೫

ಅಖಿಲ ಕರ್ನಾಟಕದಲ್ಲಿ ಹಬ್ಬಿರುವ ಏಕಮಾತ್ರ ಮಿತ್ರಮಂಡಲಿ.


ಒಲವಿನ ಗೆಳೆಯರೆ,

ನಮ್ಮ ತಂಡದ ಅಂಚೇ ಪರಿಷತ್ತಿಗೆ ಬಂದ ಠರಾವುಗಳನ್ನು ಪರಿಷತ್ಸಂಚಿಕೆಯಲ್ಲಿ ಪ್ರಕಟಿಸಿದ್ದರೂ ಹೆಚ್ಚಿನ ಗೆಳೆಯರು ಅವುಗಳ ಕುರಿತು ತಮ್ಮ ಅಭಿಪ್ರಾಯವನು ತಿಳಿಸದಿರುವುದು ಶೋಚನೀಯವಾಗಿದೆ. ಅಧಿಕ ಸಂಖ್ಯೆಯಲ್ಲಿ ಮತಗಳು ನನ್ನ ಕೈಸೇರದಿರುವುದರಿಂದ ಠರಾವುಗಳ ಮಂಜೂರಾತಿಯ ವಿಷಯವನ್ನು ಮುಂದರಿಸಲೆ ಬೇಕಾಯಿತು.

ಇನ್ನು ಸದಸ್ಯತನದ ವರ್ಗಣೀಯ ವಿಚಾರ. ವಿಶೇಷ ಸಂಚಿಕೆಯಲ್ಲಿ ವರ್ಗಣಿ ತೆರೆದವರ ಹೆಸರನ್ನು ಪ್ರಕಟಿಸಿದರೂ ಅನೇಕರು ಉದಾಸೀನಭಾವವನ್ನು ತಾಳಿದಂತಿದೆ. ಗೆಳೆಯರು ಇನ್ನಾದರೂ ತಮ್ಮ ವರ್ಗಣೀಯವನ್ನು ಕಳುಹಿಸಕೊಡಬೇಕಾಗಿ ನನ್ನ ವಿನೀತ ವಿಜ್ಞಾಪನೆ.

ಇತಿ ತಮ್ಮ ಗೆಳೆಯ,

---

'ನಿನ್ನ ವೇತನದಲ್ಲಿ ನೀನು ನಿನ್ನ ಹೆಂಡತಿಗೆ ಮನೆಗೆಷ್ಟು ಒಯ್ಯುವಿ.'

'ಏನೂ ಇಲ್ಲ.'

'ಹಾಗಾದರೆ ಅವಳು ಸುಮ್ಮನಿರುವಳೋ'

'ವೇತನದ ದಿವಸ ಅವಳೇ ಕಚೇರಿಗೆ ಬಂದು ಬಿಡುವಳು!'

---




Printed & Published by P. Venkataramanacharya at Manipal Power Press, Udipi.

# ಅಂತರಂಗದ ಇಪ್ಪತ್ತೊಂದನೆಯ ಸ್ಪರ್ಧೆ

## ಸ್ಪರ್ಧೆಯ ಬಾಬ್ತು ಜಮೆಯಾದ ಮೊಬಲಗಿನಲ್ಲಿ ಈ ರೀತಿ ಬಹುಮಾನವು ಹಂಚಲ್ಪಡುವುದು:

| | | |
|---|---|---|
| ಪ್ರಥಮ ಬಹುಮಾನ: | ರೂ. | ೪೦% |
| ದ್ವಿತೀಯ ,, | ರೂ. | ೨೦% |
| ತೃತೀಯ ,, | ರೂ. | ೧೦% |

ಎಲ್ಲರಿಗಿಂತಲೂ ಹೆಚ್ಚು ಉತ್ತರಗಳನ್ನು ಕಳುಹಿಸುವವರಿಗೆ ರೂ ೫%

| | | | | | |
|---|---|---|---|---|---|
| ೧ | | ೨ | ■ | ೩ | ಲ್ಲಿ |
| | ■ | | ■ | | ■ |
| ೪ ರ | ೫ | ■ | ೬ | | ಕ |
| ■ | ೭ | | ■ | | ■ |
| ೮ | | | ■ | ೯ | ೧೦ |
| ■ | ೧೧ ಸು | | ನ | ■ | |

### ಎಡದಿಂದ ಬಲಕ್ಕೆ

೧. ಫ್ರಾನ್ಸಿನ ಪತನದ ಸುದ್ದಿಯನ್ನು ಕೇಳಿದೊಡನೆ ಹೆಚ್ಚಿನವರಿಗೆ.......ಬಡೆದಂತಾಯಿತು ೩. ಯುದ್ಧರಂಗದಲ್ಲಿ ಹೋರಾಡಿ ಮಡಿಯುವುದಕ್ಕಿಂತ ತಮ್ಮ ನಲ್ಲೆಯರೊಡನೆ......ಮಾತುಗಳನ್ನಾಡಿ ಆನಂದಿಸುವುದೇ ಲೇಸೆಂದು ಹೆಡಿಗಳಭಿಮತ. ೪. ........ಗಳ ವಿಮಾನ ಶಕ್ತಿಯು ಅತ್ಯಧಿಕವಾಗಿದೆಯೆಂದು ಬ್ರಿಟಿಷರ ಅಭಿಪ್ರಾಯ. ೬. ೪೨ನೆಯ ಸಂವತ್ಸರದ ಹೆಸರು. ೭. ಹಿಂದು ಮುಂದಾದ 'ವೆಚ್ಚ' ೮. ಸಮೀಪ ೯. ಗೋಪಿಯರ ಮನೆಯಲ್ಲಿ ಬಾಲಕೃಷ್ಣನು ಅದೆಷ್ಟು.......ಮೊಸರನ್ನು ತಿನ್ನಲಿಲ್ಲ! ೧೧. ಸಂತೋಷ

### ಮೇಲಿಂದ ಕೆಳಕ್ಕೆ

೧. ಯುದ್ಧಕಾಲದಲ್ಲಿ ನಮ್ಮ ದೇಶದಲ್ಲಿ... ..ಯಾಗುವ ಸಂಭವವಿರುವುದರಿಂದ ರಾಷ್ಟ್ರೀಯ ಸ್ವಯಂಸೇವಕ ದಲವನ್ನು ವ್ಯವಸ್ಥೆಗೊಳಿಸಬೇಕೆಂದು ಜವಾಹರಲಾಲರಂದಿದ್ದಾರೆ. ೨. ಇತ್ತೀಚೆಗೆ........ಚಾರರ ಸಂಖ್ಯೆ ಹೆಚ್ಚಿಸಲ್ಪಟ್ಟಿದೆ. ೩. ಈ ಯುದ್ಧದಲ್ಲಿ ಬ್ರಿಟಿಷರಿಗೆ ಹೇಗಾದರೂ ಜಯದೊರಕಬೇಕೆಂದು ಇತರರಿಗಿಂತ ಸಿರಿವಂತರ.......ಯೇ ಹೆಚ್ಚಾಗಿದೆ ೫. ವೈರಿಗಳನ್ನು......ವುದೇ ತಮ್ಮ ಧ್ಯೇಯವೆಂದು ಬ್ರಿಟಿಷರ ಅಂಬೋಣ. ೧೦ ಸ್ಮರಿಸು.

### — ಸ್ಪರ್ಧೆಯ ನಿಯಮಗಳು —

ಈ ಸ್ಪರ್ಧೆಯ ಉತ್ತರವು ಅಂತರಂಗದ ಪ್ರಧಾನಸಂಪಾದಕರ ಬಳಿ ಮೊಹರು ಮಾಡಿಡಲಾಗಿದೆ. ಅದಕ್ಕೆ ಸಂಪೂರ್ಣ ಸರಿಹೋಲುವ ಉತ್ತರಕ್ಕೆ ಪ್ರಥಮ ಬಹುಮಾನವೂ, ಒಂದು ಮತ್ತು ಎರಡು ತಪ್ಪಿರುವವುಗಳಿಗೆ ಇತರ ಬಹುಮಾನಗಳೂ ಕೊಡಲ್ಪಡುವುವು. ಸರಿಹೋಲುವ ಉತ್ತರಗಳಿಲ್ಲದಿದ್ದಲ್ಲಿ ಒಂದು ತಪ್ಪು ಇರುವವರಿಗೆ ಪ್ರಥಮ ಬಹುಮಾನ ಕೊಡಲ್ಪಡುವುದು. ಬಹುಮಾನಕ್ಕೆ ಯೋಗ್ಯವಾದ ಉತ್ತರಗಳು ಒಂದಕ್ಕಿಂತ ಹೆಚ್ಚಾದಲ್ಲಿ ಮೇಲ್ಕಂಡ ಬಹುಮಾನಗಳು ಎಲ್ಲರಿಗೂ ಸರಿಸಮಾನವಾಗಿ ಹಂಚಲ್ಪಡುವುವು. ಬಹುಮಾನವನ್ನು ಹಂಚುವ ವಿಧಾನದಲ್ಲಿ ಸ್ಪರ್ಧೆಯ ಮೆನೇಜರರ ನಿಷ್ಕರ್ಷೆಯೇ ಕೊನೆಯದು ಪ್ರತಿ ಉತ್ತರಕ್ಕೂ ಪ್ರವೇಶ ಧನ ನಾಲ್ಕಾಣೆ. ಒಬ್ಬನು ಎಷ್ಟೂ ಉತ್ತರಗಳನ್ನು ಕಳುಹಿಸಬಹುದು. ಎಂಟಾಣೆಗೆ ಮೂರು ಉತ್ತರಗಳನ್ನು ಕಳುಹಿಸಬಹುದಾಗಿದೆ. ಆದರೆ ಒಬ್ಬನಿಗೆ ಒಂದಕ್ಕಿಂತ ಹೆಚ್ಚು ಬಹುಮಾನ ಕೊಡಲ್ಪಡುವದಿಲ್ಲ. ಪ್ರವೇಶ ಧನವನ್ನು ಪೋಸ್ಟಲ್ ಸ್ಟಾಂಪು, ಇಂಡಿಯನ್ ಪೋಸ್ಟಲ್ ಆರ್ಡರ್ ಅಥವಾ ಮನಿ ಆರ್ಡರ್ ಮೂಲಕ ರವಾನಿಸಬಹುದು. ಉತ್ತರವನ್ನು ಸ್ವೀಕರಿಸುವ ಕಡೇ ದಿನ ಜುಲಾಯಿ. ೩೧ ನಂತರ ಈ ಸ್ಪರ್ಧೆಗಾಗಿ ಕಳುಹಿಸುವ ಉತ್ತರಗಳನ್ನು ಸ್ವೀಕರಿಸುವುದಿಲ್ಲ. ಸ್ಪರ್ಧೆಗೆ ಉತ್ತರ ಕೊಟ್ಟವರ ಹೆಸರನ್ನೂ ಸರಿಯಾದ ಉತ್ತರವನ್ನೂ ಆಗಸ್ಟ್ ೧೮ರ "ಅಂತರಂಗ"ದಲ್ಲಿ ಪ್ರಕಟಿಸಲಾಗುತ್ತದೆ. ಸ್ಪರ್ಧೆಯ ವಿಷಯದಲ್ಲಿ ಅನಾವಶ್ಯಕ ಪತ್ರವ್ಯವಹಾರವನ್ನು ಮಾಡಲಾಗುವುದಿಲ್ಲ. ಸ್ಪರ್ಧೆಯ ಉತ್ತರಗಳನ್ನು ಕೂಪನಿನಲ್ಲಿಯಾ ಖಾಲಿ ಕಾಗದದಲ್ಲಿ ಬರೆದು ಕಳುಹಿಸಬಹುದು.

—ಮೆನೇಜರ್, ಅಂತರಂಗ ಸ್ಪರ್ಧೆ. ಉಡುಪಿ

**ಅಂತರಂಗ ಸ್ಪರ್ಧೆಗೆ ಎಲ್ಲಿಯೂ ಏಜಂಟರಿರುವುದಿಲ್ಲ.**